# ದಹನಚಿತ್ರ

ಒಂದು ಜಪಾನೀ ನಾಟಕದ
ರೂಪಾಂತರ

ಆನಂದ

ಪ್ರಕಾಶಕರು
ಕಾವ್ಯಾಲಯ
ಮೈಸೂರು

ಗೆಳೆಯ

ಶ್ರೀ ಅಂಬಿಕಾತನುಜಾತ

ಕನ್ನಡಾರಾಮಚಂದ್ರ ಬೇಂದ್ರೆಗೆ

# ಪಾತ್ರಗಳು

**ಗಿರಿ**—ಕಲಾಕೋವಿದ ; ವರ್ಷ ೪೫.

**ಚಂಪ**—ಗಿರಿಯ ಚಿತ್ರಗಳಿಗೆ ಮಾದರಿ; ಅವನ ಪ್ರಣಯವಧು ; ವರ್ಷ ೨೪.

**ರಾಜ**—ಗಿರಿಯ ಶಿಷ್ಯ ; ವರ್ಷ ೨೮.

**ರೋಹಿಣಿ**—ಗಿರಿಯ ಮಗಳು ; ವರ್ಷ ೧೪.

**ಕಿಟ್ಟಣ್ಣ**—ರೋಹಿಣಿಯ ಸೋದರಮಾವ ; ವರ್ಷ ೪೦.

ಕಾಲ : ಆಧುನಿಕ.

ದೇಶ : ನಮ್ಮದು.

# ದಹನ ಚಿತ್ರ

## ಸ್ಥಳ : ಗಿರಿಯ ಮನೆಯಲ್ಲಿ.

**ದೃಶ್ಯ**—ಗಿರಿಯ ಮನೆಯ ಅಂಗಳ—ಮನೆಯ ಹಿಂಭಾಗದ ವಿಶಾಲವಾದ ಪಡಸಾಲೆಯು ರಂಗಸ್ಥಳದ ಹೆಚ್ಚು ಭಾಗವನ್ನು ಆಕ್ರಮಿಸಿದ್ದು ವೇ[illegible]ಯಂತೆ ತೋರುವುದು. ಈ ಪಡಸಾಲೆಯ ಒಂದು ಪಕ್ಕದಲ್ಲಿ ಮಹಡಿಯ ಮೆಟ್ಟಿಲುಗಳು ಕಾಣುವುವು—ಪಡಸಾಲೆಯ ಇನ್ನೊಂದು ಪಕ್ಕದಲ್ಲಿ ಒಂದು ದೊಡ್ಡ [illegible] (Sofa) ಒಂದೆರಡು ಕುರ್ಚಿಗಳು ಇರುವುವು. ಅವುಗಳೆದುರಿಗೆ ಒಂದು '[illegible]' ಇರುವುದು ಅದರಮೇಲೆ ಒಂದು ಪುಷ್ಪಪಾತ್ರೆ ಪಡಸಾಲೆಯ ಗೋಡೆಯ ಮೇಲೆ ನಾಲ್ಕಾರು ದೊಡ್ಡ ಚಿತ್ರಪಟಗಳೂ ಇನ್ನು ಕೆಲವು ಚಿಕ್ಕ ಚಿಕ್ಕ ಚಿತ್ರಪಟಗಳೂ [illegible] ಹಾಕಲ್ಪಟ್ಟಿವೆ. ಒಂದು ಗೋಡೆಗೆ ಗಡಿಯಾರವೂ ಇದೆ. ಒಟ್ಟಿನಲ್ಲಿ ಉ[illegible]ವಾದ ಕಲಾಭಿರುಚಿಯನ್ನು ತೋರುವಂತೆ ಸುಸಜ್ಜಿತವಾಗಿದೆ.

ಅಂಗಳದಲ್ಲಿ ಒಂದೆರಡು ಹೂವಿನ ಕುಂಡಗಳಿವೆ. ಅಂಗಳದ ಒಂದು ಪಕ್ಕಕ್ಕೆ ಹೊರಗೆ ಹೋಗುವ ಬಾಗಿಲು ಕಾಣುವುದು. ಕಾಲ—ಮಧ್ಯಾಹ್ನ ಎರಡು ಗಂಟೆಯ ಸಮಯವಿರಬಹುದು.

ಪಡಸಾಲೆಯ ಒಂದು ಪಕ್ಕಕ್ಕೆ ಮಹಡಿಯ ಮೆಟ್ಟಿಲುಗಳಿಗೆ ಸಮೀಪವಾಗಿ ಒಂದು ಕಂಭ. ಅದಕ್ಕೆ ಚಂಪಳು ಸಣ್ಣ ಸರಪಳಿಗಳಿಂದ ಬಿಗಿಯಲ್ಪಟ್ಟಿದ್ದಾಳೆ. ಚಂಪಳು ಒಳ್ಳೆಯ ಮೈಕಟ್ಟಿನ ರೂಪವತಿಯಾದ ಹೆಣ್ಣು. ವಿಪುಲವಾದ ತಲೆಯ ಕೂದಲನ್ನು ಬಾಚಿ ಸೊಗಸಾಗಿ ಹೆರಳು ಹಾಕಿಕೊಂಡಿದ್ದಾಳೆ. ಜರತಾರಿ [illegible]ಂಚಿನ ತೆಳುವಾದ ಕಪ್ಪು ರೇಷ್ಮೆ ಸೀರೆಯನ್ನುಟ್ಟಿದ್ದಾಳೆ ಹಣ್ಣು[illegible]ವರ್ಣದ ರವಿಕೆಯನ್ನು ಸಾಂಪ್ರದಾಯಿಕ ರೀತಿಯಲ್ಲಿ ಬಿಗಿದು ಕಟ್ಟಿದ್ದಾಳೆ. ಹಣೆಯಲ್ಲಿ ಕ[illegible]ಮ—ಏನೋ ಅವಸರದಲ್ಲಿ ಇಟ್ಟಂತೆ ತೋರುತ್ತ ಸೌಂದರ್ಯೋಪಾಸಕನ ಕಣ್ಣುಗುರಿಯಂತಿದೆ. ಗಲ್ಲದ ಮೇಲೆ ಒಂದು ಪುಟ್ಟ ಕರಿಯ ಮಚ್ಚೆ—ಬಹುಶಃ ಪ್ರೇಕ್ಷಕರಿಗೆ ಕಾಣಲಾರದು! ಆದರೂ ಮಚ್ಚೆಯೇನೋ ಇದೆ! ಬಂಧಿಸಲ್ಪಟ್ಟಿರುವ ರೀತಿಯಲ್ಲಿ ಅವಳ ಬಾಹುಗಳಿಗೂ ಸ್ವಾತಂತ್ರ್ಯವಿಲ್ಲ. ಕಟ್ಟಿರುವ ರೀತಿಯಲ್ಲಿ ಅವಳ ಉಡುಪು ಸ್ವಲ್ಪ ಅಸ್ತವ್ಯಸ್ತವಾಗಿದೆ—ಅಂದರೆ ಸೆರಗು ಸ್ವಲ್ಪ ಓರೆಯಾಗಿ ಯೌವನ ಅರೆ ಮುಚ್ಚಿದಂತಾಗಿದೆ.

ಗಿರಿಯು ಅವಳೆದುರಿಗೆ ಎಂಟು ಹತ್ತು ಅಡಿಗಳ ದೂರದಲ್ಲಿ ಕುಳಿತು-ಬಂಧಿತ ಳಾದ ಚಂಪಳ ನಿಲುವನ್ನು ಚಿತ್ರಿಸಲು ತೊಡಗಿದ್ದಾನೆ. ಅವನು ಕುಳಿತಿರುವುದು ಒಂದು ಕಾಲುಮಣೆಯಮೇಲೆ. ಎದುರಿಗೆ ಒಂದು "ಈಸಲ್"—ಅದರ ಮೇಲೆ ಚೌಕಟ್ಟಿಗೆ ಹೊಡೆಯಲ್ಪಟ್ಟ "ಗೋಣಿ"(Canvas) ಇದೆ. ಗಿರಿಯು ಆ ಗೋಣಿಯ ಮೇಲೆ ಒಂದು ಇದ್ದಿಲು ಚೂರಿನಿಂದ, ಚಂಪಳ ನಿಲುವಿನ ಭಂಗಿಯ ಮೂಲರೇಖೆಗಳನ್ನು ಗುರ್ತಿಸುತ್ತಿದ್ದಾನೆ. ಅವನ ಪಕ್ಕದಲ್ಲಿ ಇನ್ನೊಂದು ಕಾಲುಮಣೆ-ಅದರ ಮೇಲೆ ತೈಲವರ್ಣಗಳ ಪೆಟ್ಟಿಗೆ-ಬಣ್ಣಗಳನ್ನು ಕಲಸುವ ಹಲಗೆ (Palette), ತೈಲದ ಸೀಸೆ, ಕುಂಚಗಳು (Brushes) ಇವೆಲ್ಲಾ ಇವೆ.

ಗಿರಿಯ ವರ್ಣ ಶ್ಯಾಮ—ತಲೆಯ ಕೂದಲು ಕೊಟಕಾಗಿ ಕತ್ತರಿಸಲ್ಪಟ್ಟು—ಕೆದರಿಕೊಂಡು ಪೊದೆಯಾಗಿದೆ. ಆಕೃತಿ ತೀರ ಎತ್ತರವೂ ಅಲ್ಲ—ತೀರ ಗಿಡ್ಡೂ ಅಲ್ಲ; ತೀರ ದಪ್ಪವೂ ಅಲ್ಲ—ತೀರ ತೆಳುವೂ ಅಲ್ಲ. ತೇಜೋಮಯವಾದ ಕಣ್ಣುಗಳು. ಅವನ ಮುಖಕ್ಕೆ ಸಹಜವಾದ ರಾಜಸಕಳೆ—ಈಗ ಒಂದೆರಡು ತಿಂಗಳುಗಳಿಂದ ಕ್ಷೌರವಿಲ್ಲದೆ—ತಾಮಸವಾಗಿದೆ. ಮೊಳಕಾಲವರೆಗೂ ಇಳಿಯುವ, ಸಡಿಲವಾದ ತೋಳುಗಳ ಒಂದು ಬಿಳಿಯ ಜುಬ್ಬವನ್ನು ತೊಟ್ಟಿದ್ದಾನೆ. ಅದರ ಮೇಲೆಲ್ಲಾ ಅವನು ಉಪಯೋಗಿಸುವ ನಾನಾಬಣ್ಣಗಳ ಗುರುತುಗಳು ಕಾಣುತ್ತಿವೆ. ಕೆಂಪು ಅಂಚಿನ ಪಂಚೆಯನ್ನು ಬಂಗಾಳಿಗಳ ರೀತಿಯಲ್ಲಿ ಕಚ್ಚೆಹಾಕಿ ಉಟ್ಟಿದ್ದಾನೆ. ಎಡಗೈಯಲ್ಲಿ ಹಚ್ಚಿದ ಸಿಗರೇಟು ಇದೆ. "ಗೋಣಿ" ಯ ಮೇಲೆ ಅವನು ಎಳೆದಿರುವ ಪ್ರಾರಂಭದ ಕೆಲವು ರೇಖೆಗಳು ಕಾಣುತ್ತಿವೆ.

ಗಿರಿ—(ಚಿತ್ರಿಸುವುದನ್ನು ನಿಲ್ಲಿಸಿ, ಸಿಗರೇಟನ್ನು ಬಾಯಿಗಿಟ್ಟುಕೊಂಡು, ಹಾಗೆಯೇ ಚಂಪಳನ್ನು ದಿಟ್ಟಿಸಿ ನೋಡಿ—ಪುನಃ ಸಿಗರೇಟನ್ನು ಕೈಗೆ ತೆಗೆದುಕೊಂಡು, ಹೊಗೆಯನ್ನು ತುದಿಬಾಯಿಂದ ಉಗುಳಿ) ಚಂಪಾ—

ಚಂಪ—ಏನು—?

ಗಿರಿ—ಇವತ್ತು ನಿನ್ನ ನಿಲುವಿನ ಭಂಗಿ ಚೆನ್ನಾಗಿಲ್ಲ; (ತಲೆ ಅಲ್ಲಾಡಿಸುತ್ತ) ಉಹುಂ! ಏನೇನೂ ಚೆನ್ನಾಗಿಲ್ಲ . . ತೀ. .ರ ಸಾಧಾರಣವಾಗಿದೆ!

ಚಂಪ—ಸರಿಯಾಯ್ತು ಬಿಡಿ! . . ನೀವೇ ಕಟ್ಟಿದಿರಿ—ನನ್ನ ಮೈ ಕೈ ಆಡಿಸದ ಹಾಗೆ! . . . . ನಿಮಗೆ ಹೇಗೆ ಬೇಕೋ ಹಾಗೆ ನಿಲ್ಲಿಸಿ ಕಟ್ಟಿದಿರಿ—ಈಗ ನೀವೇ ಚೆನ್ನಾಗಿಲ್ಲಾಂತೀರಿ—ನಾನೇನು ಮಾಡಲಿ?

ಗಿರಿ—ಕಟ್ಟಿರೋದೇನೋ ಸರಿ; ಆದರೆ ನಿಲುವು ಚೆನ್ನಾಗಿಲ್ಲ.

ಚಂಪ—ಅಂದರೆ?

ಗಿರಿ—(ಪುನಃ ಸಿಗರೇಟನ್ನು ಸೇದುತ್ತ—ತಲೆಯನ್ನು ಹಾಗೆ ಹೀಗೆ ಆಡಿಸುತ್ತ ಒಂದೆರಡು ಕ್ಷಣ ಚಂಪಳನ್ನು ದಿಟ್ಟಿಸಿ) ಎಲ್ಲಿ, ತಲೆಯನ್ನು ಸ್ವಲ್ಪ ಮೇಲಕ್ಕೆತ್ತು.

ಚಂಪ—(ತಲೆಯನ್ನು ಎತ್ತಿ) ಇಷ್ಟು ಸಾಕೋ?

ಗಿರಿ—ಇನ್ನೂ ಸ್ವಲ್ಪ . . . . ಸ್ವ . . ಲ್ಪ . . ಹುಂ! ಎಲ್ಲಿ, ಈಗ ಸ್ವಲ್ಪ ಹಿಂದಕ್ಕೆ ಒರಗಿಕೋ-ಕೊರಳು-ಗಲ್ಲ ಕಾಣೋಹಾಗೆ. (ಅವಳು ಹಾಗೆಯೇ ಮಾಡಲು) ಹಾ! ಅದೀಗ ಸರಿ! ಸೊಗಸು! . . ಸೊಗಸು!!

ಚಂಪ ಅಬ್ಬ!—ಇದೆಷ್ಟೋ ವಾಸಿ ಮೊದಲಿಗಿಂತ! (ಗಿರಿಯು ಅವಳನ್ನು ಕ್ಷಣಕ್ಷಣಕ್ಕೆ ನೋಡುತ್ತ ರೇಖೆಗಳನ್ನೆಳೆಯುವನು. ಒಂದು ನಿಮಿಷ ನಿಶ್ಶಬ್ದವಾಗಿರುವುದು. ಆ ಮೇಲೆ)

ಚಂಪ—(ಆಯಾಸ ಬೇಸರ ಬೆರೆತ ದನಿಯಲ್ಲಿ) ಅಯ್ಯೋ!

ಗಿರಿ—(ಚಿತ್ರಿಸುವುದನ್ನು ನಿಲ್ಲಿಸಿ ಅವಳ ಕಡೆ ತಿರುಗಿ) ಯಾಕೆ ಚಂಪಾ!

ಚಂಪ—ತೂಕಡಿಕೆ ಬರುತ್ತಿದೆ. . .

ಗಿರಿ—ಅರರೆ! ಎಲ್ಲಾದ್ರೂ ನಿದ್ದೇ ಹೋಗಿಬಿಟ್ಟೀಯ! . . ಇನ್ನು ಸ್ವಲ್ಪ ಇದೆ. . . . ಎಲ್ಲಿ, ನಿನ್ನ ತಲೇನ ಸ್ವಲ್ಪ ಎಡಕ್ಕೆ . . ಸ್ವಲ್ಪ . . ಹಾ! ಸಾಕು ಸಾಕು.

ಚಂಪ—ಸ್ವಲ್ಪ ತಗ್ಗಿಸಿಕೊಂಡರಾಗದೆ?. . ಕುತ್ತಿಗೆ ಬಹಳ ನೋಯುತ್ತಿದೆ.

ಗಿರಿ—ಇಲ್ಲ-ಇಲ್ಲ! ಈಗ ಬಹಾ. .ಳ ಸೊಗಸಾಗಿದೆ! ಸ್ವಲ್ಪ ಹಾಗೇ ಇರು.

ಚಂಪ—(ಯಾತನೆಯ ದನಿಯಲ್ಲಿ) ಅಮ್ಮಯ್ಯಾ! ಈ ಹಾಳು ಸರಪಳಿ ಬೇರೆ ನನ್ನ ತೊಡೇನ ತುಂಡು ಮಾಡ್ತಾ ಇದೆ!

ಗಿರಿ—(ನಗುತ್ತ) ಯಾರೆ ಅವಳು ಅಮ್ಮಯ್ಯ?

ಚಂಪ—ಯಾರೋ! ಸದ್ಯ ಬೇಗ ಮುಗಿಸಿರಿ! ಬದುಕೇನು!

ಗಿರಿ—ಇನ್ನೇನು ಆಗಿಹೋಯ್ತು. (ಎಂದು ಪುನಃ ಚಿತ್ರಿಸತೊಡಗುವನು. ಸ್ವಲ್ಪ ಕಾಲ ನೀರವವಾಗಿರುವುದು.)

ಚಂಪ—(ಮುಗುಳುನಗೆ ನಗುತ್ತ)....ಇಲ್ಲಿ ನೋಡಿ................

ಗಿರಿ—(ತಲೆ ಎತ್ತಿ-ಬರೆಯುವುದನ್ನು ನಿಲ್ಲಿಸಿ) ಏನು?

ಚಂಪ—ನನ್ನನ್ನ ನೀವು ಏನೂಂತ ತಿಳಿದುಕೊಂಡಿದ್ದೀರಿ?

ಗಿರಿ—ಏನೂಂತಲೆ? ಏನೆಂದು ಹೇಳಲಿ ಚಂಪಾ? ಯಾವುದೋ ಜನ್ಮದ ಕರ್ಮದ ಫಲವಾಗಿ ಈ ಕಲೆಯ ನಂದಾದೀಪ ನನ್ನ ಹೃದಯದಲ್ಲಿ ನೆಲಸಿತು; ಆದರೆ ಒಂದುದಿನ ದೊಡ್ಡ ಬಿರುಗಾಳಿ ಬೀಸಿ- ಅದು ಆರಿಹೋಯ್ತು! ನನ್ನ ಹೃದಯ ಬಹಳ ಕತ್ತಲಾಯಿತು ಚಂಪಾ; ನಾನೂ ನನ್ನ ಕಲೆಯೂ ನಿರ್ನಾಮವಾಗುವ ಕಾಲ ಬಂದಿತ್ತು! ಆದರೆ ಕಲಾದೇವಿ ನನ್ನ ಕೈಬಿಡಲಿಲ್ಲ; ಪುನಃ ನನ್ನೆದೆಯಲ್ಲಿ ದೀವಿಗೆಯನ್ನು ಹಚ್ಚಿದಳು—ಚಂಪಾ! ಇಂದು ನೀನು ಆ ದೀವಿಗೆಗೆ ಅಕ್ಷಯವಾದ ಪರಿಮಳ ತೈಲ!

ಚಂಪ—ಇದೆಲ್ಲಾ ಬರೀ ಬಾಯಿಮಾತೂ ಅನ್ನಿ! (ಎಂದು ಮೆಲುನಗೆ ನಗುವಳು.)

ಗಿರಿ—ಬಾಯಿಮಾತಲ್ಲ ಇದು ಚಂಪಾ- ಹೃದಯದ ಮಾತು-

ಚಂಪ—ಎಲ್ಲಾ ಸುಳ್ಳು!- ನಾನಂಬೋಲ್ಲ!

ಗಿರಿ—ಏಕೆ?

ಚಂಪ—ಏಕೆ?-ನೋಡಿ! ನಿತ್ಯವೂ ನನ್ನ ಹೀಗೆ ಸರಪಳಿಯಿಂದ ಬಿಗೀತೀರಲ್ಲ-ನನ್ನ ವೈ ಏನಾಗಬೇಕು?

ಗಿರಿ—**ನನ್ನ ಚಿತ್ರ**ಗಳಿಗಾಗಿ ಚಂಪ,—ಅಷ್ಟೆ.

ಚಂಪ—ನಿಮ್ಮ ಹೆಂಡತೀನೂ ಹೀಗೇ ಬಿಗೀತಿದ್ದಿರಾ?

ಗಿರಿ—ಹೌದು; ಹೀಗೇ ಬಿಗೀತಿದ್ದೆ.

ಚಂಪ—ನಾನು ಕಂಡ ಹಾಗೇ ನೀವು ಬರಿ ಈ ತರಹಾ ಚಿತ್ರಗಳನ್ನೇ ಬರೀತಿದ್ದೀರಲ್ಲ—ಹೆಂಗುಸನ್ನ ಸರಪಳೀಲಿ ಬಿಗಿದಿರೋ ಹಾಗೆ! ಇಂಥಾ ಚಿತ್ರಗಳು ಹೆಚ್ಚಾಗಿ ಮಾರಾಟವಾಗುತ್ತವೆಯೋ?

ಗಿರಿ—ಇಲ್ಲ.

ಚಂಪ—ಹಾಗಾದರೆ ಯಾಕೆ ಇಂಥಾದ್ದನ್ನ ಬರೀತೀರಿ?

ಗಿರಿ—ನನಗೆ ಅದೊಂದು ಹುಚ್ಚು ಹಿಡಿದು ಹೋಗಿದೆ ಚಂಪ! ಈ ಹುಚ್ಚಿನಲ್ಲಿ, ಬಿಗಿದು ಬಂಧಿಸಲ್ಪಟ್ಟ ಹೆಂಗುಸು ನನ್ನ ಕಣ್ಣಿಗೆ ಬಲು ಸೊಗಸಾಗಿ ಕಾಣುತ್ತಾಳೆ!–ಆ ಸೊಗಸಿನ ಬಗೆಬಗೆಯ ಭಂಗಿಗಳನ್ನು ನನ್ನ ಚಿತ್ರಗಳಲ್ಲಿ ಶಾಶ್ವತ ಮಾಡುತ್ತಿದ್ದೇನೆ ಅಷ್ಟೆ.

ಚಂಪ—ಹೆಂಗುಸರು, ಅಬಲೆಯರು-ನಿಸ್ಸಹಾಯರು ಎಂದೆ ?-ನಿಮಗೆ ಇಂಥಾ ಭಾವನೆ ?

ಗಿರಿ—ಛೆ ! ಛೆ !!-ಎಲ್ಲಾದರೂ ಉಂಟೆ ? ಅಬಲೆಯರು !-ನಿಸ್ಸಹಾಯರು!!-ಪಾ—ಪ ! ಹಾಗೆನ್ನಿಸಿಕೊಂಡೆ ಅವರ ಹಾವಳಿ ತಡೆಯದಾಗಿದೆ ! ನಿಜವಾಗಿ ಚಂಪ !-ಅವರ ದೌರ್ಬಲ್ಯ- -ಅವರ ನಿಸ್ಸಹಾಯತೆ ಶುದ್ಧ ಮೋಸ ! ತತ್ತರಬಡಿಸುವ ಮೋಸ !

ಚಂಪ—ಹಾಗಾದರೆ ಅವರ ಬಂಧನದಲ್ಲಿ ನಿಮಗೇಕೆ ಇಷ್ಟು ಆಸಕ್ತಿ ?

ಗಿರಿ—ಏಕೆ ಎಂದು ನಾನು ಹೇಳಲಾರೆ ಚಂಪ; ಅಂತೂ ನನ್ನ ಕಣ್ಣಿಗೆ ಬಂಧಿಸಲ್ಪಟ್ಟ ಹೆಣ್ಣು ಬಲು ಚೆನ್ನಾಗಿ ಕಾಣುತ್ತಾಳೆ. ಎಷ್ಟೆಷ್ಟು ಬಿಗಿದು ಕಟ್ಟಿದರೆ ಅಷ್ಟಷ್ಟೂ ಹೆಚ್ಚುತ್ತೆ ಅವಳ ಸೌಂದರ್ಯ ! ತೀರ ಸಾಧಾರಣ ಹೆಂಗುಸೂ ಮೋಹಿಸುವಂತಾಗುತ್ತಾಳೆ--ಸರಪಳಿ ಬಂಧನದಿಂದ ! ಅಂಥಾದ್ದರಲ್ಲಿ ರೂಪಸಿಯ ಲಾವಣ್ಯ ಬಂಧನದಲ್ಲಿ ಇನ್ನು ಹೇಗೆ ಕಂಡೀತು !

ಚಂಪ—ಅದನ್ನು ನೀವೇ ಕಾಣಬೇಕು !

ಗಿರಿ—ನಿಜ ನಾನೇ ಕಾಣುತ್ತಿದ್ದೇನೆ. (ಚಿತ್ರಿಸತೊಡಗುವನು. ಸ್ವಲ್ಪ ಹೊತ್ತು ನಿಶ್ಶಬ್ದವಾಗಿರುವುದು.) ಚಂಪ, ಎಡದ ಮುಂಡೀನ ಸ್ವಲ್ಪ ಮೇಲಕ್ಕೆತ್ತು. (ಅವಳು ಎತ್ತಲು) ಹಾ!-ಸಾಕು.

ಚಂಪ—ನೀವು ನಿಮ್ಮ ಹೆಂಡ್ತೀನ ಹೀಗೆ ಕಟ್ಟಿ ಚಿತ್ರಿಸಿದ ಮೇಲೆ . . . .

ಗಿರಿ—ಹುಂ. . . .

ಚಂಪ—. . . .ಚಿತ್ರಹಿಂಸೆ ಮಾಡುತ್ತಿದ್ದರಂತೆ-ನಿಜವೆ ?

ಗಿರಿ—ಹೌದು—ಹೌದು ! ಚಿತ್ರಹಿಂಸೆ !-ವಿಚಿತ್ರ ಹಿಂಸೆ !! (ಸ್ವಲ್ಪ ಗಂಭೀರವಾಗಿ ಅವಳನ್ನೇ ದಿಟ್ಟಿಸಿ ನೋಡುತ್ತ) ಚಂಪಾ, ನಿನಗೆ ಯಾರು ಹೇಳಿದೋರು ಇದನ್ನೆಲ್ಲಾ ?

ಚಂಪ—ನನಗೆ ರಾಜ ಎಲ್ಲಾ ಹೇಳಿದ.

ಗಿರಿ—(ಬರೆಯುವುದನ್ನು ನಿಲ್ಲಿಸಿ, ಸೊಂಟದ ಮೇಲೆ ಕೈಗಳನ್ನಿಟ್ಟು) ಚಂಪ !--ನೀನು ಸ್ವಲ್ಪ ಹದ್ದುಮೀರುತ್ತಿದ್ದೀಂತ ಕಾಣುತ್ತೆ !

ಚಂಪ—ಏನು ಹಾಗೆಂದರೆ ?

ಗಿರಿ—ರಾಜನ ಹತ್ತಿರ ಏನು ಅಷ್ಟು ಏಕಾಂತ ನಿನಗೆ? ಅವನು ಇನ್ನೂ ಏನೇನು ಹೇಳಿದ?

ಚಂಪ—ಏನೋ ಕೆಟ್ಟ ಅನುಮಾನ ನಿಮಗೆ! ಪಾ—ಪ, ನೀವೂಂದ್ರೆ ರಾಜನಿಗೆ ಎಷ್ಟು ಗೌರವ-ಭಕ್ತಿ.

ಗಿರಿ—ನೀನೂಂದ್ರೆ?

ಚಂಪ—ನಿಮಗೆ ಏನೋ ಹೊಸ ಹುಚ್ಚು ಹಿಡಿದಹಾಗಿದೆ!

ಗಿರಿ—ಇದು ಪ್ರಪಂಚದಲ್ಲಿ ಬಹಳ ಹಳೆಯ ಹುಚ್ಚು ಚಂಪಾ! ನಾನು ಮೊದಲು ಹೇಳಿದೆನಲ್ಲಾ ಆ ಹುಚ್ಚು ಈ ಹುಚ್ಚು ಅವಳಿ ಜವಳಿ! ಇವೆರಡಕ್ಕೂ ಮೂಲ ಒಂದೇ.

ಚಂಪ—ಅದ್ಯಾವುದು?

ಗಿರಿ—ಹೆಣ್ಣು!

ಚಂಪ—ಇವತ್ತು ನಿಮ್ಮ ಮಾತು ಒಂದೂ ಅರ್ಥವಾಗೊಲ್ಲ; ಎಲ್ಲಾ ಒಗಟು.

ಗಿರಿ—ಹೆಂಗುಸಿಗಿಂತ ಕಷ್ಟವಾದ ಒಗಟೆಯೇ?

ಚಂಪ—ಏನೋ, ನನಗೊಂದೂ ಗೊತ್ತಿಲ್ಲ; ಸದ್ಯ ಬೇಗ ಮುಗಿಸಿ–ನನ್ನ ಕಾಲು ಕಡಿದುಬೀಳೋಹಾಗಿದೆ! (ಎಂದು ಮಂಡಿಯನ್ನು ಸ್ವಲ್ಪ ಕೆಳಗಿಳಿಸುವಳು.)

ಗಿರಿ—ಇದೋ-ಸ್ವಲ್ಪ ನಿಧಾನಿಸು-ಮುಗಿಸಿಬಿಟ್ಟೆ; ಕಾಲು ಅಲುಗಿಸಬೇಡ-ನಾನು ಈಗ ಅದೇ ಭಾಗವನ್ನೇ ಬರೀತಾ ಇರೋದು.

ಚಂಪ—ಅಯ್ಯೋ—ನಿಂತೂ ನಿಂತೂ ಸಾಕಾಗಿದೆಯಲ್ಲಾಂದ್ರೇ!

ಗಿರಿ—ಆಗಿಹೋಯ್ತು!-ಇನ್ನು ಒಂದೇ ನಿಮಿಷ!-ಎಲ್ಲಿ ನಿನ್ನ ಬಲಹೆಜ್ಜೆಯನ್ನು ಸ್ವಲ್ಪ ಬಲಕ್ಕೆ ಸರಿಸು-ನೋಡಿದೆಯಾ, ಎಡದ ಮಂಡಿ ತಗ್ಗಿಸಿಬಿಟ್ಟೆ—ಮೇಲಕ್ಕೆ—ಇನ್ನು ಸ್ವ....ಲ್ಪ; ಹುಂ--ಸಾಕು—

ಚಂಪ—ಇದೇನೂಂದ್ರೆ! ಬಟ್ಟೆ ಸರಿಯಾಗಿ ನನ್ನ ಮೈ ಮುಚ್ಚಿಲ್ಲ—

ಗಿರಿ—ಮುಚ್ಚದೆ ಇದ್ದರೆ ಏನಾಯ್ತು!

ಚಂಪ—ಚನ್ನಾ—ಯ್ತು! ನಾಚಿಕೆಗೇಡು!!

ಗಿರಿ—ಮತ್ತೆ?—ರೂಪಸಿ ಅಬಲೆಯಲ್ಲ—ಪ್ರಬಲೆ ಎಂದು ತಿಳಿಯುವುದು ಹೇಗೆ?

ಚಂಪ—ತಿಳಿದು ಏನಾಗಬೇಕು ?

ಗಿರಿ—ಹಾ, ಚಂಪಾ ಅದರಲ್ಲಿದೆ ಸರಪಳಿಬಂಧನದ ಗುಟ್ಟು !

ಚಂಪ—ಚಿಃ—ನಿಮ್ಮ ಹಾಳುಗುಟ್ಟಿಗೆ—ನಾನು ರಟ್ಟಾಗಬೇಕೊ ?

ಗಿರಿ—(ಅವಳ ಮಾತನ್ನು ಗಮನಿಸದೆ)—ಎಲ್ಲಿ ಮುಖದಲ್ಲಿ ಬಂಧನದ ಯಾತನೆ ಆಕ್ರೋಶ ಕಾಣಲಿ—ಕಾಲ ಬೆರಳುಗಳನ್ನು ಅದುಮಿ ಮಡಿಸಿಕೋ !

ಚಂಪ—ನೀವು ಮೊದಲು ನನ್ನ ಮೈಮೇಲೆ ಬಟ್ಟೆ ಸರಿಮಾಡಿ !

ಗಿರಿ—ಉಹುಂ—ಈಗ ನೀನು ಹೇಗೆ ಕಾಣುತ್ತೀಯಾ ಹೇಳಲೆ ?

ಚಂಪ—ಹೇಗೆ !

ಗಿರಿ—ಎಲೆಗಳ ಮರೆಯಿಂದ ಇಣಿಕಿ ನೋಡುತ್ತಿರುವ-ಚೆನ್ನಾಗಿ ಮಾಗಿ ರಸಪೂರ್ಣವಾದ ಕಿತ್ತಿಲೆ ಹಣ್ಣಿನಂತೆ ಕಾಣುತ್ತೀಯೆ ! (ಎಂದು ಮೆಚ್ಚುಗೆಯಿಂದ ಅವಳನ್ನೇ ನೋಡುತ್ತ ಹಲ್ಲು ಕಿರಿಯುತ್ತಾನೆ.)

ಚಂಪ—ಹೀಗೆ ಇನ್ನೂ ಸ್ವಲ್ಪ ಹೊತ್ತು ನಿಂತಿದ್ದರೆ ಜಜ್ಜಿದ ಹುಣಿಸೆಹಣ್ಣಿನಂತಾಗುತ್ತೇನೆ !-ಅದು ಗೊತ್ತೇನು ?-ಬೇಗ ಮುಗಿಸಿ-ಅಥವಾ ಎಷ್ಟಾಗಿದೆಯೋ ಅಲ್ಲಿಗೇ ನಿಲ್ಲಿಸಿ.

ಗಿರಿ—ಆಗಲಿ-ಚಂಪ ; ಇವತ್ತು ಇಷ್ಟಕ್ಕೇ ಸಾಕು-(ಎಂದು ಎದ್ದು ನಗುತ್ತ ಅವಳ ಸಮೀಪಕ್ಕೆ ನಿಧಾನವಾಗಿ ಹೋಗುತ್ತಾನೆ).

ಚಂಪ—ಅವನ (ಇಂಗಿತವನ್ನು ತಿಳಿದು) ಬೇಡ !-ಬೇಡ !! ನನ್ನ ಮೈ ನುಚ್ಚು ನುರಿಯಾಗಿದೆ ! (ಅವನು ಅವಳ ಮೇಲೆ ಕೈ ಹಾಕಲು ಹೋಗುತ್ತಾನೆ.) ಇದೇನೊಂದ್ರೆ ! ಇಷ್ಟು ಹಿಂಸೆ ?-ಕೈ ಕಾಲು ಅಡಿಸದ ಹಾಗೆ ಕಟ್ಟಿ ?

ಗಿರಿ—ಓ ! ನಿಜ ಮರೆತೇಬಿಟ್ಟಿದ್ದೆ ಚಂಪ-ನನಗೆ ಆ ಎಲೆಯ ಮರೆ ಕಿತ್ತಿಲೆ ಹಣ್ಣಿನ ಜ್ಞಾನ ! ಇದೋ ಬಿಚ್ಚಿದೆ-(ಎಂದು ಬಿಚ್ಚಿ ಅವಳ ಹೆಗಲ ಮೇಲೆ ಕೈಹಾಕುವನು-ಅಷ್ಟು ಹೊತ್ತಿಗೆ ಹೊರಗೆ ಏನೋ ಸದ್ದಾದಂತಾಗುವುದು.)

ಚಂಪ—(ಸದ್ದನ್ನು ಆಲೈಸಿ) ಸ್ವಲ್ಪ ಸುಮ್ಮನಿರಿ-(ಗಂಭೀರವಾಗಿ !) ಯಾರಾದರೂ ಬರೋ ಹೊತ್ತು : ಹೆದರಿಕೆ ನಾಚಿಕೆ ತೀರಾ ಬಿಟ್ಟರೆ ಹೇಗೆ (ಪುನಃ ಆಲಿಸಿ) ಕೇಳಿತೆ ? ಬಾಗಿಲು ತೆರೆದ ಸದ್ದಾಯಿತು !. . . . ಬಹುಶಃ ರಾಜ ಬಂದಂತೆ ಕಾಣುತ್ತೆ.

ಗಿರಿ—(ಬೇಸರದಿಂದ ತೋಳುಗಳನ್ನು ಒದರುತ್ತ) ಹುಂ! ಹಾಳು ಏನಾದರೂ ಒಂದು ವಿಘ್ನ!

(ಹೊರಗೆ ಯಾರೋ ಕೂಗಿದ ಸದ್ದಾಗುವುದು.)

ಚಂಪ—ರಾಜನ ಧ್ವನಿಯಲ್ಲಾಂದ್ರೇ-ಇನ್ನಾರೋಂತ ಕಾಣುತ್ತೆ. (ಗಿರಿಯು ಅಂಗಣದ ಹೊರಬಾಗಿಲಲ್ಲಿ ಕಣ್ಮರೆಯಾಗುವನು. ಚಂಪಳು ತನ್ನನ್ನು ಬಿಗಿದಿದ್ದ ಸರಪಳಿಗಳನ್ನೆಲ್ಲಾ ಒಂದು ಕಡೆಗೆ ಎಸೆದು, ಗಿರಿ ಹೋದ ಕಡೆಯೇ ದಿಟ್ಟಿಸಿ ನೋಡುತ್ತ ಮಹಡಿಯ ಮೆಟ್ಟಲುಗಳನ್ನು ಹತ್ತಿ ಹೋಗುವಳು. ಗಿರಿಯು ಕಿಟ್ಟಣ್ಣ ಮತ್ತು ರೋಹಿಣಿಯರೊಡನೆ ಕುಶಲಪ್ರಶ್ನೆಗಳನ್ನು ಮಾಡುತ್ತ ಪ್ರವೇಶಿಸುವನು. ರೋಹಿಣಿಯ ಮುಖದಲ್ಲಿ ಒಳ್ಳೆಯ ತಿಳಿ ವಳಿಕೆಯ ಕಳೆ ಇದ್ದರೂ ಅದರಲ್ಲಿ ಯಾವುದೋ ಖಿನ್ನತೆ ಬರೆತಿದೆ. ಮಾಸಿದ ಬಿಳಿಯ ಸೀರೆಯನ್ನುಟ್ಟಿದ್ದಾಳೆ. ಎರಡು ಕೈಗಳಲ್ಲೂ ಒಂದೊಂದು ಗಾಜಿನ ಬಳೆ. ಇನ್ನೇನೂ ಒಡವೆಯಿಲ್ಲ. ಜಡೆ ಹೆಣೆದುಕೊಂಡಿದ್ದಾಳೆ. ಏನೋ ಭಯಗೊಂಡಂತೆ ಕಾಣುತ್ತಾಳೆ. ಕಿಟ್ಟಣ್ಣನು ಸ್ವಲ್ಪ ಸ್ಥೂಲಕಾಯ-ಬಿಳೀ ಜುಬ್ಬ-ಹೂವು ಅಂಚಿನ ಖಾದಿದೋತ್ರ-ಗೀರಂಚಿನ ಪಂಚೆ-ತಲೆಗೆ ಖಾದಿ ಟೋಪಿ-ಕಾಲಿಗೆ ಹಳ್ಳಿನಾಡಿನ ನಾಜೂಕಲ್ಲದ ಮೆಟ್ಟು-ಕೈಲಿ ಕೋಲು-ಅಲ್ಲಾ ದೊಣ್ಣೆ; ಇಷ್ಟು ಅವನ ಅಲಂಕಾರ--)

ಗಿರಿ—ಏನು ಕಿಟ್ಟಣ್ಣ, ಬಹಳ ಅಪರೂಪವಾಗಿ ಬಂದು ಬಿಟ್ಟೆ?

ಕಿಟ್ಟಣ್ಣ—ಹೌದಪ್ಪಾ, ಸ್ವಲ್ಪ ಅಪರೂಪವೇ; ಮನೇಲಿ . . . .

ಗಿರಿ—ನಿನ್ನ ಹೆಂಡತಿ ಕ್ಷೇಮವಷ್ಟೆ?

ಕಿಟ್ಟಣ್ಣ—ಇಲ್ಲಪ್ಪಾ, ಅದಕ್ಕೇ ಬಂದದ್ದು ಇವತ್ತು.

ಗಿರಿ—ಓ, ಹಾಗೆಯೇ! ಏನು ವಿಚಾರ!-ಏನಾಗಿದೆ?

(ಕಿಟ್ಟಣ್ಣನೂ ರೋಹಿಣಿಯೂ ಸೋಫಾದಮೇಲೆ ಕುಳಿತುಕೊಳ್ಳುವರು-ಗಿರಿ ನಾಚಿಕೊಂಡೇ ಮಾತನಾಡುವನು.)

ಕಿಟ್ಟಣ್ಣ ನೋಡೂ. . . .(ಎಂದು ಅಲ್ಲಿಗೇ ನಿಲ್ಲಿಸುವನು.)

ಗಿರಿ—ಅದೇನು ಇಷ್ಟು ಹಿಂತೆಗೀತಿದೀಯ?-ಹೇಳು.

ಕಿಟ್ಟಣ್ಣ—ನೋಡು ಗಿರಿ, ಕಳೆದ ಸುಗ್ಗೀಲಿ ಅವಳು ಹಾಸಿಗೆ ಹಿಡಿದು ಮಲಗಿದಳು, ಇನ್ನೂ ಹಾಸಿಗೆ ಬಿಟ್ಟಿಲ್ಲ.

ಗಿರಿ—ಅಯ್ಯೋ ಗ್ರಹಚಾರವೇ!-ಏನಾಗಿದೆ ಅವಳಿಗೆ?

ಕಿಟ್ಟಣ್ಣ—ಏನೋ ಸೊಂಕಿನಿಂದ ಬಂದ ರೋಗವಂತೆ.

ಗಿರಿ—ಕ್ಷಯ-ಗಿಯಾನೋ?

ಕಿಟ್ಟಣ್ಣ—ಏನೋ ಹಾಗಂತಾರಪ್ಪ.

ಗಿರಿ—ಅಲ್ಲಾ ಕಿಟ್ಟಣ್ಣಾ, ನಾನು ಬೇರೆ ಅವಳಿಗೆ ಆ ಕಾಯಿಲೆ ಬರುತ್ತೇಂತ ಕನಸಿನಲ್ಲೂ ತಿಳಿದಿರಲಿಲ್ಲ!--ಏನು ಗ್ರಹಚಾರ!

ಕಿಟ್ಟಣ್ಣ—ನಾನು ತಿಳಿದಿರಲಿಲ್ಲ ಗಿರಿ; ಗಟ್ಟಿಮುಟ್ಟಾಗಿದ್ದಳು–ಒಳ್ಳೇ ಗಾಳೀ ಬಿಸಿಲಲ್ಲಿ ಓಡಾಡಿಕೊಂಡು-ನಮ್ಮ ಗ್ರಹಚಾರ-ಈಗ ಹೀಗಾಗಿ ಬಿಟ್ಟಿದ್ದಾಳೆ-ಈಗಿನ ನಮ್ಮ ಕಷ್ಟ ಹೇಳಿ ತೀರದು ಗಿರಿ;-ನಾಯಿ ಪಾಡು! . . . ಅದಕ್ಕೇ . . . ಇವತ್ತು ಇಲ್ಲೀಗೆ ಬಂದೆ; . . , ಇದೇ ಈ . . . ರೋಹಿಣೀ ವಿಚಾರ . . . ನಿನ್ನ ಹತ್ತಿರ . . . ಮಾತಾಡೋಣಾಂತ.

ಗಿರಿ—(ಸ್ವಲ್ಪ ಗಂಭೀರವಾಗಿ) ಹುಮ್ ಮ್-ಮ್-ಮ್:

ಕಿಟ್ಟಣ್ಣ—(ತಡೆ ತಡೆದು) ನೋಡು ಗಿರೀ, ನಿನ್ನ . . . . ಹೆಂಡತಿ ಸತ್ತು ಏಳುವರ್ಷವಾಯ್ತು . . . . ಆಗ ಕರೆದುಕೊಂಡು ಹೋದೆ ಈ ಮಗೂನ. ಏಳು ವರ್ಷ ನಮ್ಮ ಮನೆಯ ಗಂಜಿ ಅಂಬಲಿ ಕುಡಿದು ಕೊಂಡು ಬೆಳೆದಳು. ಇವಳು ಮಗುವಾಗಿದ್ದಾಗ ಇದ್ದಷ್ಟು ತೊಂದರೆ . . . . ಈಗ ಇಲ್ಲಾ ಅನ್ನು . . . . ಆದರೆ ಈಗ ಕಾಲ ಬದಲಾಯಿಸಿದೆ . . . . ರೋಹಿಣಿಗೆ ಈಗ ಹದಿನಾಲ್ಕು ವರ್ಷ . . . . ಇನ್ಯಾವ ವಿಷಯದಲ್ಲೂ ಅವಳು . . . . ನಮಗೆ ಸ್ವಲ್ಪವೂ ಭಾರವಲ್ಲ-ಅನ್ನು ಬಿಟ್ಟೆ ನಮಗಾದ್ದೆ. ಅವಳಿಗೂ ಆಗುತ್ತೆ . . . . ನನ್ನ ತಂಗೀಮಗಳು ನಮಗೇನೂ ಹೊರಗಿನವಳಲ್ಲ. ಈ ಏಳು ವರ್ಷಗಳಲ್ಲಿ ನಿನ್ನ ಮಗಳು ಎಷ್ಟೋ ಮನೆಗೆಲಸಗಳನ್ನು ಕಲಿತಿದ್ದಾಳೆ; ಒಂದು ವರ್ಷದಿಂದ ಈಚೆಗಂತೂ ಅವಳ ಸಹಾಯ ನಮಗೆ ಅಷ್ಟಿಷ್ಟಲ್ಲ-ಆದರೆ ಹಾಗೇಂತ ಹದಿನಾಲ್ಕು ವರ್ಷದ ಹೆಣ್ಣನ್ನು ಸುಮ್ಮನೇ ಮನೇಲಿ ಇಟ್ಟುಕೊಂಡಿರೋಕಾಗುತ್ತೆಯೆ ಗಿರಿ? . . . ಅದು ಇವತ್ತು . . . . ನಿನ್ನ . . . . ನೋಡೋಕೆ ಬಂದೆ; ರೋಹಿಣಿ ಎಷ್ಟಾದರೂ ನಿನ್ನ . . .

ಗಿರಿ—(ಕಿಟ್ಟಣ್ಣನ ಮನೋಗತವನ್ನು ತಿಳಿದು-ಅಷ್ಟರಲ್ಲೇ ಬಾಯಿಹಾಕಿ) ನನಗೆ

ಏನೂ ತೋಚಿಲ್ಲ--ಈ ವಿಷಯದಲ್ಲಿ. ಏಳು ವರ್ಷದ ಹಿಂದೆ ಎಲ್ಲಾ ಕಳೀತು ಎಂದು ಮಾಡಿದ್ದೆ. ಈಗ-ಹೀಗೆ-ಏಕಾ ಏಕಿ ಹುಡುಗೀನ ಕರೆದುಕೊಂಡು ಬಂದರೆ ನಾನು ಏನು ಹೇಳಲಿ ?

ಕಿಟ್ಟಣ್ಣ—ಯಾಕೆ "ಹುಡುಗೀ" ಅಂತೀಯ ? ರೋಹಿಣಿ ಅನ್ನೋಕೆ ಬಾಯಿ ಬರೊಲ್ಲವೆ ?—ನಿನ್ನ ಮಗಳಲ್ಲವೆ ರೋಹಿಣಿ ?

ಗಿರಿ—ಆ ಮಾತೆಲ್ಲಾ ಬೇಡ ಈಗ ಕಿಟ್ಟಣ್ಣ : . . . ಅವಳೇನೋ ನನ್ನ ಮಗಳು ನಿಜ, ಒಪ್ಪೋಣ ! ಅದೇ ಬಂದಿರೋದು ಫಜೀತಿ !

ಕಿಟ್ಟಣ್ಣ—ಇದೇನೋ ವಿಚಿತ್ರವಾಗಿ ಮಾತಾಡ್ತೀಯಲ್ಲ ಗಿರಿ ! ಯಾವತ್ತಿನಿಂದ ಹೀಗಾದೆ ?

ಗಿರಿ—ಏಳುವರ್ಷವಾಯ್ತು ಹೀಗಾಗಿ ! (ಮುಗುಳುನಗೆ ನಗುತ್ತಾನೆ.) ಅವತ್ತು ನೀನು ಕರೆದುಕೊಂಡು ಹೋದೆಯಲ್ಲ ಅವಳನ್ನ-ಅವತ್ತೇ ನಾನು ಎಲ್-ಲ್ಲಾ ತೊಡೆದುಹಾಕಿಬಿಟ್ಟೆ !

ಕಿಟ್ಟಣ್ಣ—ಏನು ಎಲ್ಲ ತೊಡೆದು ಹಾಕಿದ್ದು ?

ಗಿರಿ—ನಾನು ತಂದೆ-ಅವಳು ಮಗಳು ಅನ್ನೋದನ್ನ !

ಕಿಟ್ಟಣ್ಣ—ನಿನ್ನ ಬುದ್ಧಿ ನೆಟ್ಟಗಿಲ್ಲ-ಗಿರಿ !

ಗಿರಿ—ಹೌದು ಕಿಟ್ಟಣ್ಣ-ಏಳುವರ್ಷದ ಹಿಂದೆ ಅದು ಸ್ವಲ್ಪ ಡೊಂಕಾಯಿತು !-ಏಟು ತಗಲಿ !

ಕಿಟ್ಟಣ್ಣ—ಸರಿಯಪ್ಪ ! ಉದ್ಧಾರವಾದ ಹಾಗೇ ಆಯ್ತು !!

ಗಿರಿ—ಅಲ್ಲವೊ ಕಿಟ್ಟಣ್ಣ, ಏಳುವರ್ಷದ ಹಿಂದೆ ಕಿತ್ತುಹೋದ ದಾರಾನ ಇವತ್ತು ಮತ್ತೆ ಗಂಟು ಹಾಕೋಕೆ ನೋಡ್ತೀಯಲ್ಲಾ !--ಏನು ಹೇಳಲಿ ನಿನಗೆ !

ಕಿಟ್ಟಣ್ಣ—ಸರಿ ! ಸರಿ ! ಹೇಳೋದು ಕೇಳೋದು ಇನ್ನೇನೂ ಉಳಿದಿರೋ ಹಾಗೆ ಕಾಣೆ ! (ಎಂದು ನೆಲವನ್ನೇ ನೋಡುತ್ತ ಯೋಚನಾಪರನಾಗುತ್ತಾನೆ. ಹಾಗೆಯೇ ನಿದಾನವಾಗಿ ಪಕ್ಕಕ್ಕೆ ತಿರುಗಿ ರೋಹಿಣಿಯನ್ನು ನೋಡುತ್ತಾನೆ. ರೋಹಿಣಿ ಅವನನ್ನು ನೋಡುತ್ತಾಳೆ. ಅವಳ ಕಣ್ಣುಗಳಲ್ಲಿ ಯಾತನೆ--ದೈನ್ಯತೆ ಹೊಮ್ಮುತ್ತಿವೆ.)

ಗಿರಿ—ಏನು ಕಿಟ್ಟಣ್ಣೋರೇ-ಬಹಳ ಯೋಚನೆ ಮಾಡುತ್ತಿರೋ ಹಾಗೆ ಕಾಣುತ್ತಲ್ಲಾ ?

ಕಿಟ್ಟಣ್ಣ—ಯೋಚನೆ ಮಾಡುತ್ತಿದೇನೆ! ನೀನು ನಿಜವಾಗಿಯೂ ಮನುಷ್ಯನೋ ಅಥವಾ ರೂಪದಲ್ಲಿ ಮಾತ್ರ ಮನುಷ್ಯನೋ-ಎಂದು!

ಗಿರಿ—ಹ-ಹ್ಹ-ಹ್ಹ-ಹ್ಹ-ಹ್ಹಾ !!!

ಕಿಟ್ಟಣ್ಣ—ಗಿರಿ, . . . ನಾನು ಅವತ್ತು ಈ ಮಗೂನ ಕರೆದುಕೊಂಡು ಹೋದೆನಲ್ಲಾ ಆಗ ನೀನು ಏನು ಭಾವಿಸಿಕೊಂಡೆ ?

ಗಿರಿ—ನಿಜವಾಗಿ ಹೇಳಲೆ ?

ಕಿಟ್ಟಣ್ಣ—ಹೇಳು-ನಿನಗೇನು ಹೆದರಿಕೆ ?

ಗಿರಿ—ಕಿಟ್ಟಣ್ಣ ಬಹಳ ಉಪಕಾರಿ-ನನ್ನ ಮನೇಲಿದ್ದ ಮುಳ್ಳನ್ನ ತೆಗೆದುಕೊಂಡು ಹೋದಾಂತ-(ಎಂದು ಮತ್ತೆ ಹಲ್ಲು ಕಿರಿದು ನಗುವನು.)

ಕಿಟ್ಟಣ್ಣ—ಆಹಾ !—ಪಾಪೀ ! ನಿನ್ನ ರೋಹಿಣಿ ನಿನಗೇ ಮುಳ್ಳಾದಳೇ:.... ಅಂದು ರೋಹಿಣಿ ತಾಯಿನಾನ ಕಳೆದುಕೊಂಡು ತಬ್ಬಲಿಯಾದಳು. (ರೋಹಿಣಿ ಮೆಲ್ಲಗೆ ಸೆರಗಿನ ತುದಿಯಿಂದ ಕಣ್ಣು ಒರೆಸಿಕೊಳ್ಳುವಳು.) ನನಗೆ ನೋಡಿ ಸಂಕಟವಾಯಿತು-ನಿನ್ನ ಒಪ್ಪಿಗೇ ಮೇಲೆ ಕರೆದುಕೊಂಡು ಹೋಗಿ, ಮನೇ ಮಕ್ಕಳ ಜೊತೆಗೆ ಇದೂ ಒಂದೂಂತ ಸಾಕಿದೆ—ಅಷ್ಟೆ ; ನಾನು ಅವಳನ್ನು ದತ್ತು ತೆಗೆದುಕೊಳ್ಳಲಿಲ್ಲ-ತಿಳಿಯಿತೆ ?

ಗಿರಿ—ಈಗಲೂ ಅದಕ್ಕೆ ಕಾಲವೇನೂ ಮೀರಿಲ್ಲ. (ಎಂದು ನಗುವನು.)

ಕಿಟ್ಟಣ್ಣ—ನಿನ್ನ ವಕ್ರಬುದ್ಧಿ ಮಾತು ಹಾಗಿರಲಿ . . . . ನಾನು ಕರೆದುಕೊಂಡು ಹೋಗಿ ಏಳು ವರ್ಷವಾಯಿತಲ್ಲಾ—(ಈ ಏಳು ವರ್ಷದಲ್ಲಿ ಒಂದು ಕ್ಷಣವಾದರೂ ನೀನು-ಹೆತ್ತ ತಂದೆ-ಅವಳನ್ನ ಜ್ಞಾಪಿಸಿಕೊಂಡಿದ್ದೀಯಾ ?) ಅವಳು ಇದ್ದಾಳೆಯೋ ಸತ್ತಿದ್ದಾಳೆಯೋ ವಿಚಾರಿಸಿದೆಯಾ ? (ಮಗು ಸಂತೋಷಪಡಲಿ-ಎಂದು ಒಂದು ಕಿಲುಬು ಕಾಸನ್ನಾದರೂ ಕಳಿಸಿದೆಯಾ ?) ನಾವು ಆಗಾಗ ಹಾಸ್ಯವಾಗಿ ಮಾತಾಡಿಕೊಳ್ಳುತ್ತಿದ್ದೆವು—"ಗಿರಿ ತನಗೆ ಒಬ್ಬಳು ಮಗಳಿದ್ದಾಳೆ ಅನ್ನೋದನ್ನೇ ಮರೆತಹಾಗೆ ಕಾಣುತ್ತೇಂತ ! . . . "

ಗಿರಿ—ಅದೊಂದು ಮಾತು ನಿಜ ನೋಡು ಕಿಟ್ಟಣ್ಣ !

ಕಿಟ್ಟಣ್ಣ—ಏನು ನಾಚಿಕೆಯಿಲ್ಲದೆ ಮಾತನಾಡುತ್ತೀ—ಗಿರಿ ! ನನಗೆ ನಾಚಿ

ಕೆಯಾಗುತ್ತಪ್ಪ ನಿನ್ನ ಮಾತು ಕೇಳಿ—ಇದೇನು ಹುಡುಗಾಟಿಕೆಗೆ ಇಳಿದುಬಿಟ್ಟೆಯಲ್ಲ! . . . ಗಿರಿ, ರೋಹಿಣಿ ನನ್ನ ಮನೇಲಿ ಇರೋದ ರಿಂದ-ಅನ್ನಾ ಬಟ್ಟೆಗೆ ಭಾರ—ಅದಕ್ಕೇ ಇಲ್ಲಿಗೆ ಬಂದಿದ್ದೇನೇಂತ ತಿಳುಕೋಬೇಡ; (ಅವಳಿಂದ ನಮಗೆ ಎಷ್ಟೋ ಸಹಾಯ. ನಮ್ಮ ಅಂಬಲಿಯೋ ಗಂಜಿಯೋ ಚಿಂದಿಚೂರೋ ಅವಳಿಗೂ ಆಗುತ್ತೆ— ಆದರೂ ಇನ್ನು ಮೇಲೆ ಅವಳ ಜವಾಬ್ದಾರಿ ನಿನಗೆ ಸೇರಿದ್ದು;-ಅವಳು ಇಲ್ಲಿ ಇರೋದೇ ಸರಿ. ಯಾಕೇ ಅಂತಿಯೋ?—ಅದಕ್ಕೆ ಎರಡು ಕಾರಣ ಇವೆ; ಒಂದು ಅವಳಿಗೆ ವಯಸ್ಸಾಗಿದೆ-ನಾವು ಬಡವರು— ಹಳ್ಳೀಲಿ ಜನರ ಬಾಯಿ ಕಟ್ಟೋಕೆ ಆಗೊಲ್ಲ—ಇನ್ನೊಂದು) ನನ್ನ ಹೆಂಡತಿ ಕಾಯಿಲೆ. ಅದರದ್ದೇ ನನಗೆ ಹೆಚ್ಚು ಯೋಚನೆ.

ಗಿರಿ—ಅದೇನಪ್ಪ—ಅಂಥಾ ಯೋಚನೆ?

ಕಿಟ್ಟಣ್ಣ—ನೋಡು ನನ್ನ ಹೆಂಡತಿಗೆ ಕ್ಷಯ—ಸೊಂಕು ಜಾಡ್ಯ. (ನಾಳೆ ಇವಳಿಗೆ ಏನಾದರೂ ಆಯಿತಪ್ಪ-ಆಗ ನಾನು ತಾನೆ ತಲೆ ಕೊಡೋನು? ತಿಳಿದೂ ತಿಳಿದೂ ಬೆನ್ನಲ್ಲಿ ಬಿದ್ದ ತಂಗೀಮಗೂನ ಕ್ಷಯರೋಗೀ ಹತ್ತಿರ ಇಟ್ಟುಕೊಂಡಿರೋದು ಹೇಗೆ? ಅದು ಖಂಡಿತಾ ನನ್ನಿಂದ ಆಗದ ಕೆಲಸ) . . . ನಾಳೆ ಏನಾದರೂ ಹೆಚ್ಚು ಕಡಮೆಯಾದರೆ—ತಬ್ಬಲಿ ಮಗೂನ ಸಾಕ್ತೀನೀಂತ ಕರಕೊಂಡು ಹೋಗಿ ಸುಡುಗಾಡಿಗಟ್ಟಿದ ಸೋದರಮಾವಾಂತ ನೀನೇ ಅಂತೀಯ, ಬಿಡ್ತೀಯೇನು?

ಗಿರಿ—ಛೆ! ಛೆ! ಛೆ!! ಎಂಥಾ ಅನ್ಯಾಯದ ಮಾತಾಡ್ತೀ ಕಿಟ್ಟಣ್ಣ!

[ಕಿಟ್ಟಣ್ಣ—ನೀನೆಷ್ಟು ನ್ಯಾಯವಾಗಿ ಮಾತಾಡುತ್ತಿದ್ದೀ ನೋಡು!

ಗಿರಿ—ಅಲ್ಲವೋ ಕಿಟ್ಟಣ್ಣ-ಮೊದಲೇ ಇದೆ—"ಹರಿಣಾಪಿ-ಹರೇಣಾಪಿ . . ." ಅಂತ; ಅದರ ಹಣೇಲಿ ಹಾಗೆ ಬರೆದಿದ್ದರೆ ಅದು ನಿನ್ನ ತಪ್ಪೇ? ಪ್ರಮಾಣವಾಗಿಯೂ ಹೇಳುತ್ತೇನೆ ಕಿಟ್ಟಣ್ಣ—ನಾನು ಅಂಥಾ ಅನ್ಯಾಯದ ಮಾತನ್ನ ಎಂದಿಗೂ ಆಡೋಲ್ಲ!—ಏನೇ ಆಗಲಿ!

ಕಿಟ್ಟಣ್ಣ— ಆಹಾ: ನಿನ್ನ ಪ್ರಮಾಣ-ನಿನ್ನ ನ್ಯಾಯ ಎಲ್ಲಾ "ದನಾತಿನ್ನೋ ನಿಗೆ ಗೊಬ್ಬರದಾಣೆ" ಅಂತಾರಲ್ಲಾ ಹಾಗೆ! . . . (ಪುಸಲಾಯಿಸುವ

ದನಿಯಲ್ಲಿ)(ಗಿರಿ, ಗಿರಿ, ಹೊಟ್ಟೇಲಿ ಹುಟ್ಟಿದ ಮಗು ಕಸಕ್ಕೆ ಕಡೆಯಾಯಿತಲ್ಲವೆ? . . . . ಲೋ, ಗಿರಿ, ನನ್ನ ಮಾತು ಸ್ವಲ್ಪ ಕೇಳು—ಹುಡುಗಾಟಿಕೆ ಸಾಕು. ಕೆಡಕು ಆಗೋಕೆ ಮುಂಚೆ ಹುಷಾರಾಗ ಬೇಕು. ಸೋಂಕು ಏನಾದರೂ ತಗುಲಿ ರೋಗ ಬಲೀತೂಂದ್ರೆ ಆ ಮೇಲೆ ಏನು ಮಾಡಿದರೂ ಪ್ರಾಣ ದಕ್ಕೋದಲ್ಲ.)

ಗಿರಿ—ಸರಿ ಅದಕ್ಕೆ ನಾನೇನು ಮಾಡಬೇಕೂಂತೀಯೆ? (ಇದ್ದಕಿದ್ದ ಹಾಗೆ ಆಕಾಶದಿಂದ ಇಳೀಬಿದ್ದು ಈ ಮಾತು ಎತ್ತುತ್ತೀಯಲ್ಲಾ—ನಿಂತ ಕಾಲ್ಮೇಲೆ ಉತ್ತರ ಹೇಳೋಕೆ ಆಗುತ್ತೆಯೇ? ಈಗ ನನ್ನ ಸುಮ್ಮನೇ ಪೀಡಿಸಬೇಡ . . . . ಸ್ವಲ್ಪ ನಿಧಾನಿಸು,) . . . "

ಕಿಟ್ಟಣ್ಣ—ಏನಂದೆ ?]

ಗಿರಿ—ನನ್ಮಾತು ಕೇಳು; ಸದ್ಯಕ್ಕೆ ನಿಮ್ಮನೆಗೇ ವಾಪಸು ಕರೆದುಕೊಂಡು ಹೋಗಿರು—ಜನ ಬೇಕಾದ್ದಾಡಲಿ-ನೀನು ಅದನ್ನೆಲ್ಲಾ ಕಿವೀ ಮೇಲೆ ಹಾಕಿಕೋ ಬೇಡ—ಬೊಗಳೋವು ಬೊಗಳಿಕೊಳ್ಳಲಿ! ನಾನೂ ಸದ್ಯದಲ್ಲೇ ಏನಾದರೂ . . . ಸ್ವಲ್ಪ . . . ಕಳಿಸುತ್ತೀನೆ ಯೋಚನೆ ಮಾಡಬೇಡ.

ಕಿಟ್ಟಣ್ಣ—(ಕೋಪದಿಂದ) ಏನಂದೇ ? ಏನಾದರೂ-ಸ್ವಲ್ಪ !-ಕಳಿಸುತ್ತೀನಿ !!-ಗಿರೀ, ನಿನ್ನ ಮನೆ ಬಾಗಿಲಿಗೆ ಯಾಚನೆಗೆ ಬಂದೇಂತ ತಿಳಿದೆಯಾ ?

[ಗಿರಿ –ಏನೋ ತೊಂದರೆ ಮನೇಲೀಂತ ಅಂದೆ ?

ಕಿಟ್ಟಣ್ಣ—ಅದೇನೋ ನಿಜ, ಆದರೆ ಗಿರೀ, ನಿನ್ನ ಗೋಪಾಳದ ಕಾಸಿಗೆ ಕೈಯೊಡ್ಡಲು ಬರಲಿಲ್ಲ! ಅಂಥಾ ಹೊತ್ತು ಬಂದರೆ ಕಲ್ಲು ಮಣ್ಣು ಹೊತ್ತು ಸಂಪಾದಿಸುತ್ತೀನೆ !

ಗಿರಿ—ಹಾಗಾದರೆ ನಿನ್ನ ಇಷ್ಟ—ನಾನೇನೂ ಹೇಳಲಾರೆ—]

ಕಿಟ್ಟಣ್ಣ—ಗಿರಿ, ಸ್ವಲ್ಪ ಮನುಷ್ಯನ ಹಾಗೆ ಮಾತನಾಡು! ಏನು ?—ನಿನಗೆ ಇಷ್ಟು ಗೊತ್ತಾಗೊಲ್ಲವೆ? ನನ್ನ ಹೆಂಡತಿ ಸ್ಥಿತಿ ಸ್ವಲ್ಪಾನು ಚೆನ್ನಾಗಿಲ್ಲ—ಬಲು ಕಷ್ಟದಿಂದ ಉಸಿರಾಡುತ್ತಾಳೆ. ಒಂದೊಂದು ಸಲ ಕೆಮ್ಮಿದಳೆಂದರೆ ಇಷ್ಟಿಷ್ಟು ರಕ್ತಬರುತ್ತೆ ! ಮನೆಯೋ ಔಷಧಿವಾಸನೆಯಿಂದ ತುಂಬಿಹೋಗಿದೆ. (ನನ್ನ ಈಗಿನ ಸ್ಥಿತಿಯಲ್ಲಿ ಅವಳನ್ನ

ಈ ಊರಿಗೆ ತಂದು ಆಸ್ಪತ್ರೆಯಲ್ಲಿ ಇಡಲು ಸುತರಾಂ ಸಾಧ್ಯವಿಲ್ಲ—ಮನೆಯೋ ತೀರಾ ಚಿಕ್ಕದು—ಹುಡುಗರು ಮೂರುಹೊತ್ತೂ ಅವಳ ಹಾಸಿಗೆ ಹತ್ತಿರಲೇ ಓಡಾಡುತ್ತಿರುತ್ತವೆ. ಅವಕ್ಕೆ ಅದು ತಪ್ಪಿದ್ದಲ್ಲ-ಅವರ ಹಣೇಬರಹ! ಆದರೆ ನಿನ್ನ ಮಗಳ ವಿಷಯ ಬೇರೆ—ನೀನೋ ಹೆಸರಾದ ಚಿತ್ರಗಾರ. ನಿನ್ನ ಉಳಿದ ವಿಚಾರ ಹೇಗೇ ಇರಲಿ—ಚೆನ್ನಾಗಿ ಸಂಪಾದಿಸುತ್ತಿದ್ದೀಯೆ. ಇಂತಹ ದೊಡ್ಡ ಊರಿನಲ್ಲಿ ನೆಮ್ಮದಿಯಾಗಿ ಇರೋದಕ್ಕೆ ನಿನಗೆ ಯೋಗ್ಯತೆ ಇದೆ.—ಇನ್ನು ಮೇಲೆ ನಿನ್ನ ಮಗಳು ನಿನ್ನ ಹತ್ತಿರ ಇರೋದೇ ನ್ಯಾಯ. ಇಲ್ಲಿ ಯಾವುದಕ್ಕೂ ಕೊರತೆ ಇಲ್ಲ. ಅವಳನ್ನ ವಾಪಸು ಕರೆದುಕೊಂಡು ಹೋಗಿ ರೋಗಕ್ಕೆ ತುತ್ತುಮಾಡಬೇಕೆಂತ ನನಗೆ ಸ್ವಲ್ಪವೂ ಇಷ್ಟವಿಲ್ಲ. ಗಿರಿ, ಖರ್ಚಿಗೆ ಹೆದರಿ ಈ ಮಾತು ಹೇಳುತ್ತೇನೇಂತ ಭಾವಿಸಬೇಡ. ನನಗೆ ಅದು ಮುಖ್ಯವಲ್ಲ. ಇವಳು ಸುಖವಾಗಿ ಬದುಕಿ ಬಾಳೋದು ಮುಖ್ಯ. ಮನೆಯಲ್ಲಿ ಅವಳ ಕಾಯಿಲೆ ವಿಷಯ ಹೀಗೇಂತ ಹೇಳೋದು ಕಷ್ಟ. ಪಂಡಿತರು ಹೇಳೋದರಲ್ಲಿ ಅವಳು ಈ ವರ್ಷ ಕಳೆಯೋದೇ ಕಷ್ಟವಾಗಿ ಕಾಣುತ್ತೆ; ಅಥವಾ ಇನ್ನು ಮೂರು ನಾಲ್ಕು ವರ್ಷ ತಳ್ಳಬಹುದು—ರೋಗದ ವಿಷಯ ಯಾವುದೂ ಖಂಡಿತವಲ್ಲ.) ಹೀಗಿರೋವಾಗ ರೋಹಿಣೀನ ನಾನು ಮನೆಗೆ ಕರೆದುಕೊಂಡು ಹೋದರೆ ಅವಳಿಗೆ ಅಪಾಯ ಖಂಡಿತ. ಆಗ ನಾನೇನು ಮಾಡಲಿ?

ಗಿರಿ—ಅದಕ್ಕೆ ಯಾರು ಏನು ಮಾಡೋಕಾಗುತ್ತೆ ಕಿಟ್ಟಣ್ಣ? ಎಲ್ಲಾ ಗ್ರಹಚಾರ ಅಷ್ಟೇ! ನಿನ್ನ ಮಕ್ಕಳಿಗೆ ಇರೋ ಅಪಾಯವೇ ಅವಳಿಗೂ ಇರುತ್ತೆ! ಇದನ್ನು ಖಂಡಿತ ತಿಳಿ—ಏನೇ ಆಗಲಿ, ಅದಕ್ಕೆ ನೀನು ಹೊಣೇಂತ ನಾನೆಂದಿಗೂ ಹೇಳೊಲ್ಲ-ಭಾಷೆ ಕೊಡುತ್ತೇನೆ!

ಕಿಟ್ಟಣ್ಣ—ಪಿಶಾಚಿ ಭಾಷೆ! . . . ಗಿರೀ, ಪ್ರಾಣಿಮಾತ್ರಕ್ಕೆ ಸಹಜವಾದ ಮಮತೆಯೂ ಇಲ್ಲವಾಯಿತೇ ನಿನಗೆ!

ಗಿರಿ—(ನಿರ್ಲಿಪ್ತನಂತೆ ನಿದಾನವಾಗಿ ತಲೆ ಆಲ್ಲಾಡಿಸುತ್ತ) ಉಹುಂ!-ಇಲ್ಲ!

ಕಿಟ್ಟಣ್ಣ—ದಯೆ? ಕನಿಕರ?

ಗಿರಿ—ಯಾವುದೂ ಇಲ್ಲ.

ಕಿಟ್ಟಣ್ಣ—ಮಾನಾವಮಾನ?

ಗಿರಿ—ಹೇಳಿದೆನಲ್ಲ-ಯಾವುದೂ ಇಲ್ಲಾಂತ.

ಕಿಟ್ಟಣ್ಣ—ಎಷ್ಟುದಿನವಾಯ್ತು-ಎಲ್ಲಾ ಮಾರಿಕೊಂಡು?

ಗಿರಿ—ಏಳು ವರ್ಷ!

ಕಿಟ್ಟಣ್ಣ—ಗಿರಿ, ಹೋಗಲಿ, ಮಮತೆ, ದಯೆ-ಕನಿಕರ ಯಾವುದೂ ಬೇಡ-ರೋಹಿಣಿ ಮನೆಗೆಲಸಗಳನ್ನೆಲ್ಲಾ ಚೆನ್ನಾಗಿ ಮಾಡುತ್ತಾಳೆ. ಅದಕ್ಕಾದರೂ ಅವಳಿಗೆ ನೆರಳುಕೊಡು.

ಗಿರಿ—ಉಹುಂ! ಅದೆಲ್ಲಾ ಆಗದಮಾತು—ಅದಕ್ಕೆಲ್ಲಾ ಬೇರೆ ಇದ್ದಾರೆ. ನೋಡು ಕಿಟ್ಟಣ್ಣ ನಾನು ಹಿಂದೆ-ಏಳುವರ್ಷಕ್ಕೆ ಹಿಂದೆ ಪಟ್ಟ ಕಷ್ಟ ಸಂಕಟ ದೇವರಿಗೆ ಗೊತ್ತು . . . .

ಕಿಟ್ಟಣ್ಣ—ಆಹಾ! ಪಿಶಾಚಿ ಬಾಯಲ್ಲಿ ದೇವರ ಹೆಸರು!

ಗಿರಿ—ನೀನು ಏನಾದರೂ ತಿಳಿದುಕೋ. ನನ್ನ ಜೀವನ ವಿಷಮಯವಾಗಿತ್ತು. ಎಷ್ಟೋ ಪ್ರಯತ್ನಮಾಡಿ ಅದನ್ನೆಲ್ಲಾ ತೊಳೆದು ಹಾಕಿದೆ—ಈಗ ಇಷ್ಟು ದಿನದಮೇಲೆ ನನಗೆ ಪುನಃ ಆ ವಿಷದ ಸೊಂಕು ಬೇಡ. ಇವಳನ್ನು ನೀನೇ ಕರೆದುಕೊಂಡು ಹೋಗು.

ಕಿಟ್ಟಣ್ಣ—ಊ-ಹುಂ! ವಿಷದ ಸೊಂಕು!-ಅಲ್ಲವೆ! ನೀನೇ ವಿಷವಾದೆ ನಿನ್ನ ಹೆಂಡತಿಗೆ! ಈಗ, ಅವಳಲ್ಲಿ ಪಡೆದ ಮಗು ನಿನಗೆ ವಿಷವಾಯಿತಲ್ಲವೆ?

ಗಿರಿ—ಆ ಮಾತೆಲ್ಲಾ ಯಾಕೆ ಈಗ ಕಿಟ್ಟಣ್ಣ? ಇವಳನ್ನು ನೀನೇ ಕರೆದುಕೊಂಡು ಹೋಗು. ×

(ರೋಹಿಣಿ ಮೆಲ್ಲಗೆ ಕಿಟ್ಟಣ್ಣನ ತೋಳನ್ನು ಎಳೆಯುತ್ತಾಳೆ. ಕಿಟ್ಟಣ್ಣ ತಿರುಗಿ ನೋಡುತ್ತಾನೆ. ರೋಹಿಣಿ ಕಣ್ಣೊರೆಸಿಕೊಳ್ಳುತ್ತ ಹೋಗೋಣವೆಂದು ಸನ್ನೆಮಾಡುತ್ತಾಳೆ.)

ಕಿಟ್ಟಣ್ಣ (ಗಿರಿ, ರೋಹಿಣೀಗೇನೋ ನಮ್ಮ ಮನೆ ಬಿಟ್ಟು ಬರಲು ಅಷ್ಟು ಸುಲಭವಾಗಲಿಲ್ಲ. ನೆನ್ನೆ ರಾತ್ರಿ ಇದೇ ಮಾತು ಬಂದಾಗ, ಇಲ್ಲಿಗೆ ಬರಲು ರೋಹಿಣಿಯೂ ಒಪ್ಪಲಿಲ್ಲ-ನನ್ನ ಹೆಂಡತಿಯೂ ಒಪ್ಪಲಿಲ್ಲ—

ಆದರೆ ನಾನು ಬಲವಂತಪಡಿಸಿದೆ. ನನಗೆ ಇವಳ ವಯಸ್ಸು-ಅವಳ ಖಾಯಿಲೆ ದಿಗಿಲು ಎರಡೂ ಬಾಧಿಸುತ್ತಿದ್ದವು. ಇವಳಿಗೆ ನನ್ನ ಹುಡುಗೀರ ಹಾಗೆ ದೇಹದಾರ್ಢ್ಯವಿಲ್ಲ—ಬಲು ಸೂಕ್ಷ್ಮ. ಇಂಥವಳು ರೋಗೀ ಹತ್ತಿರ ಮೂರುಹೊತ್ತೂ ತಿರುಗಾಡುತ್ತಿರುವುದು ನನಗೆ ಸರಿ ತೋರಲಿಲ್ಲ; ಅದಕ್ಕೇ ಇಲ್ಲಿಗೆ ಕರೆತಂದೆ. ಏಳುವರ್ಷ ನನ್ನ ಮಕ್ಕಳ ಜೊತೆಯಲ್ಲಿ ಸಾಕಿದ ಈ ಮಗೂನ ಇಲ್ಲಿ ತೊರೆದು ಹೋಗೋದೆಂದರೆ ನನಗೂ ಸಂಕಟ—ಕರುಳನ್ನು ಕಿತ್ತಿಸೆದ ಹಾಗಾಗುತ್ತೆ. ಇಲ್ಲಿಗೆ ಹೊರಟುಬರುವ ಮುಂಚೆ ಮನೆಯಲ್ಲಿ ಹುಡುಗರ ಗೋಳು ಹೇಳ ತೀರದು; ಎಷ್ಟಾದರೂ ಜೊತೆಯಲ್ಲಿ ಬೆಳೆದವು.) ಈಗ ಪುನಃ ಇವಳನ್ನು ಕರೆದುಕೊಂಡು ಹೋದರೆ ಎಷ್ಟು ಸಂತೋಷವೋ ~~ಮಕ್ಕಳಿಗೆ~~-ಅವಳಿಗೆ.

ಗಿರಿ—ಹಾ! ಅದೀಗ ಸರಿಯಾದ ಮಾತು! (ಅದು ಬಿಟ್ಟು ಆಗದ ಹೋಗದ ಮಾತೆಲ್ಲಾ ಆಡ್ತೀಯಲ್ಲ ಕಿಟ್ಟಣ್ಣ! ಇನ್ಯಾರ ಹೊಟ್ಟೇಲಾದರೂ ಹುಟ್ಟಿದ್ದರೆ ಅವಳ ಬಾಳು ನೆಟ್ಟಗಾಗುತ್ತಿತ್ತೋ ಏನೋ! ಇಲ್ಲಿ ಹುಟ್ಟಿದಳು-ಜೊತೆಗೇ ಹುಟ್ಟಿತು ದುರದೃಷ್ಟ! ನಿನ್ನ ಮನೆಯೇ ಸರಿ ಅವಳಿಗೆ-ಕಿಟ್ಟಣ್ಣ.) ಏಳು ವರ್ಷಗಳಿಂದ ಅವಳು ಸಂಪೂರ್ಣವಾಗಿ ನಿಮ್ಮವಳಾಗಿದ್ದಾಳೆ. ಇನ್ನು ಮೇಲಾದರೂ ಅಷ್ಟೇ-ಅವಳ ಮದುವೆಯೋ-ಮಾರಾಟವೋ ಯಾವುದಕ್ಕೂ ನಿನಗೆ ಪೂರ್ಣ ಸ್ವಾತಂತ್ರ್ಯ! ನಾನೊಂದು ಮಾತೂ ಆಡೋಲ್ಲ. ಇದೊಂದು ವಿಷಯಕ್ಕೆ ಮಾತ್ರ ನಾನು ಇಲ್ಲವೇ ಇಲ್ಲಾಂತ ತಿಳಿದುಕೋ-

ಕಿಟ್ಟಣ್ಣ—ಲೋ, ಗಿರೀ, ನೀನು ಮನುಷ್ಯಜಾತಿಗೇ ಕಳಂಕ! ನೀನು ಮಾನಾ ಮಾರಿಕೊಂಡೆ-ಇನ್ನು ನಿನ್ನ ಮಗಳ ಮಾರಾಟವಾಗಬೇಕಲ್ಲವೆ? ಪಾಪಿ!-ಜ್ಞಾಪಕವಿರಲಿ ಅವಳ ತಾಯಿ ನನ್ನ ತಂಗಿ!

ಗಿರಿ—ಅದರ ಜ್ಞಾಪಕ ಚೆನ್ನಾಗಿದೆ! ಅದಕ್ಕೇ ಅವಳು ಇಲ್ಲಿ ಬೇಡಾ ಅಂದಿದ್ದು ಅದೇ ಕಣ್ಣು-ಅದೇ ಹಣೆ-ಅದೇ ಗಲ್ಲ! ಎಲ್ಲಾ ಅದೇ! ಇದನ್ನೆಲ್ಲಾ ಮೂರುಹೊತ್ತೂ ನೋಡುತ್ತ ಹಾಳಾದ ನೆನಪಿನ ಕಿಚ್ಚಿನಲ್ಲಿ ಸೀಯುವುದು ನನ್ನಿಂದಾಗದು! ಉಹುಂ!!-ಆಗದು!

ಕಿಟ್ಟಣ್ಣ—ನಿನ್ನ ಸ್ವಭಾವಕ್ಕೆ ತಕ್ಕ ಮಾತು ನೀನು ಆಡುತ್ತಿದ್ದೀಯೆ. ತಿಪ್ಪೆ ಯಿಂದ ಪರಿಮಳ ಹೊರಟೀತೆ!

ಗಿರಿ—ತಿಪ್ಪೆಗೆ ಬಂದು ಪರಿಮಳ ಬಯಸಿದರೆ ಆಗುತ್ತೆಯೇ? ಹ ಹ್ಹ ಹ್ಹ ಹ್ಹಾ!

ಕಿಟ್ಟಣ್ಣ—(ಏನು ನಾಚಿಕೆಯಿಲ್ಲದೆ ನಗುತ್ತೀಯೋ!

ಗಿರಿ—ವಿಷಯ ಅಷ್ಟು ಸ್ವಾರಸ್ಯವಾಗಿದೆ! ಹ ಹ್ಹ ಹ್ಹ ಹ್ಹಾ!)

ರೋಹಿಣಿ—ಮಾವಾ, ಸಾಕು ನಡಿ ಮನೆಗೆ ಹೋಗೋಣ. ನೀನೇ ಬಲ ವಂತ ಮಾಡಿದೆ . . . . ಬಂದಿದ್ದಾಯಿತು. ಕೇಳಿದ್ದಾಯಿತು— ಇನ್ನೂ ನಿಂತಿರಬೇಕೇ ಇಲ್ಲಿ? ಬಾ.

ಕಿಟ್ಟಣ್ಣ (ಅವಳ ತಲೆಯನ್ನು ಸವರುತ್ತ) ಹೌದು ರೋಹಿಣಿ-ನಾವಿಲ್ಲಿಗೆ ಬರ ಬಾರದಾಗಿತ್ತು. ಇದು ತಿಪ್ಪೆ! (ಇಗೋ ಇನ್ನು ಮುಂದೆ ಇವನಿಗೂ ನಿನಗೂ ತೊರೆದುಹೋಯ್ತು! ನಿಮ್ಮಪ್ಪ ನ್ನಿಸಿಕೊಂಡವನು ನಿನ್ನ ಭಾಗಕ್ಕೆ ಸತ್ತುಹೋದಾಂತ ತಿಳಿದುಕೋ! ನನ್ನ ನಾಲ್ಕು ಹುಡುಗ ರೊಂದಿಗೆ ನೀನೂ ಒಬ್ಬಳು-ಐದನೆಯವಳು.) ಬಾ (ಎಂದು ರೋಹಿಣಿ ಯೊಡನೆ ಹೊರಡಲನುವಾಗುವನು.)

ಗಿರಿ—(ವ್ಯಂಗ್ಯವಾಗಿ) ಹೊ ಹ್ಹೊ ಹ್ಹೊ ಹ್ಹೋ!!

(ಕಿಟ್ಟಣ್ಣನು ಹೊರಟಿದ್ದವನು ನಿಂತು ತಿರುಗಿ, ಗಿರಿಯನ್ನೇ-ಮೇಲೆ ಬೀಳುವ ತೆರದಲ್ಲಿ-ದಿಟ್ಟಿಸಿ ನೋಡುವನು.)

ರೋಹಿಣಿ (ಕಿಟ್ಟಣ್ಣನನ್ನು ತಡೆಯುತ್ತ) ಬಾ ಮಾವಾ, ಇನ್ನ್ಯಾಕೆ ಮಾತು? ಎಲ್ಲಾ ಮುಗೀತಲ್ಲ-ಬಾ.

ಕಿಟ್ಟಣ್ಣ—(ರೋಹಿಣಿಯ ಬೆನ್ನು-ಮುಂದಲೆ ಸವರುತ್ತ) ಹೌದು-ಹೌದು ಕಂದ- ಇನ್ನು ಪ್ರಾಣವಿರೋ ತನಕ ಈ ಪಾಪಿಯ ಮನೆಯನ್ನು ಮೆಟ್ಟ ಬಾರದು!-ಬಾ ಹೋಗೋಣ (ಎಂದು ಇಬ್ಬರೂ ಹೊರಟುಹೋಗುವರು.)

(ಗಿರಿ ಒಬ್ಬನೇ ನಿಂತು ಏನೋ ಯೋಚನೆಯಲ್ಲಿ ಮುಳುಗುತ್ತಾನೆ. ಇವನ ಶಿಷ್ಯ ರಾಜ ಪ್ರವೇಶಿಸುತ್ತಾನೆ. ರಾಜ ಲಕ್ಷಣವಾದ ಆಳು. ತಲೆ ಕ್ರಾಪನ್ನು ಚೆನ್ನಾಗಿ ಬಾಚಿಕೊಂಡಿದ್ದಾನೆ. ಸಡಿಲವಾದ ಬಿಳಿ ಪಾಯಿಜಾಮು, ಅದರ ಮೇಲೆ ಮೊಳಕಾಲವರೆಗೂ ಬರುವ ಜುಬ್ಬ-ಜುಬ್ಬದ ಮೇಲೆ ಒಂದು ಕರೀ

ವೆಸ್ಟು ಕೋಟು ಇಷ್ಟು ಅವನ ಉಡುಪು. ಕಾಲಿಗೆ ನಯವಾದ ಬೂಟ್ಸು ಹಾಕಿಕೊಂಡಿದ್ದಾನೆ. ಮೀಸೆಯಿಲ್ಲದ ಮುಖ.)

ರಾಜ—ಉಸ್ಸಪ್ಪ! (ಎಂದು ಆಯಾಸವನ್ನು ಪ್ರಕಟಿಸಿ, ಗಿರಿಯು ಮೌನವಾಗಿರುವುದನ್ನು ನೋಡಿ) ಗುರುಗಳೇ, ಈಗತಾನೇ ಇಲ್ಲಿಂದ ಹೋದರಲ್ಲಾ ಅವರು ಕಿಟ್ಟಣ್ಣೋರಲ್ವೇ?

ಗಿರಿ—ಹೌದು-ಅವನೇ.

ರಾಜ—ಓಹೋ-ಹಾಗಾದರೆ ಅವರ ಜೊತೆಯಲ್ಲಿದ್ದವಳು ರೋಹಿಣಿ! ಅದಕ್ಕೇ ಅವಳನ್ನ ನೋಡುತ್ತಿದ್ದ ಹಾಗೆಯೇ . . . . ಕನಕಮ್ಮನವರ ಜ್ಞಾಪಕವಾಯ್ತು; ಎಂಥಾ ಹೋಲಿಕೆ! ಯಾರಪ್ಪಾಂತಿದ್ದೆ! ಎಷ್ಟು ಬೆಳೆದುಬಿಟ್ಟಿದ್ದಾಳೆ! ಆಗಲಿ! . . . . ಛೆ! ಎಂಥಾ ಕೆಲಸವಾಯ್ತು! ಸ್ವಲ್ಪ ಮುಂಚೆ ಬಂದಿದ್ದರೆ ಮಾತಾಡಿಸಬಹುದಿತ್ತು . . . ಅದೇನು ಈಗ ಬಂದಿದ್ದರು-ಗುರುಗಳೇ!

ಗಿರಿ—ಅದೇನೋ ಅವನ ಹೆಂಡತೀಗೆ ಏನೋ ರೋಗವಂತೆ ಮನೇಲಿ ತೊಂದರೆಯಂತೆ-ಎಷ್ಟು ನಿಜವೋ ಎಷ್ಟು ಸುಳ್ಳೋ! ಅಂತೂ ಮೆಲ್ಲಗೆ ಅದನ್ನ ಇಲ್ಲಿ ತಗಲುಗಟ್ಟಿ ಹೋಗೋಣಾಂತ ಬಂದಿದ್ದ!

ರಾಜ—ಅದಕ್ಕೆ ನೀವೇನಂದಿರಿ?

ಗಿರಿ—ಆಗೊಲ್ಲಾಂದೆ-ನನಗೆ ಅದು ಸ್ವಲ್ಪವೂ ಇಷ್ಟವಿರಲಿಲ್ಲ.

ರಾಜ—ಅಯ್ಯೋ ಪಾಪ! ಕಷ್ಟ!

ಗಿರಿ—ಅಲ್ಲವೆ?-ನೀನೇ ಹೇಳು?-ಎಷ್ಟು ಕಷ್ಟ ಅವಳನ್ನ ಇಲ್ಲಿ ಇಟ್ಟುಕೊಂಡಿರೋದು!

ರಾಜ—ಸರಿಯಾಯ್ತು ಬಿಡಿ! ನಾನು ಕಷ್ಟಾಂತ ಹೇಳಿದ್ದು ಯಾರಿಗೆ?

ಗಿರಿ—ನನಗಲ್ಲವೆ?

ರಾಜ—ಹಾಸ್ಯ ಮಾಡ್ತೀರಲ್ಲ! (ಜೇಬಿನಿಂದ ಹಣ ತೆಗೆದು) ಇಗೋ ಅವರಿಬ್ಬರೂ ಹಣ ಕೊಟ್ಟರು.

ಗಿರಿ—ಸರಿ, ಆ ಜಮೀನುದಾರನಿಂದ ಎಷ್ಟು ಬಂತು?

ರಾಜ—ಎಪ್ಪತ್ತು ರೂಪಾಯಿ. ಇಬ್ಬರದ್ದೂ ಸೇರಿ ಒಟ್ಟು ನೂರಹತ್ತು ರೂಪಾಯಿ ಇದೆ.

ಗಿರಿ—ಸದ್ಯ ಹಗುರವಾಯ್ತು !(ಆ ಭಂಡರು ಕೊಡೋಲ್ಲಾಂತನೇ ಮಾಡಿದ್ದೆ; ಅದರಲ್ಲೂ ಆ ಜಮೀನುದಾರನಿದ್ದಾನಲ್ಲಾ ಅವನು ಬಲು ಠಕ್ಕ ಆಸಾಮಿ-ತಿಂಗಳಿಗೊಬ್ಬ ಹುಡುಗೀನ ಕರಕೊಂಡು ಬಂದು ಅವಳ ಚಿತ್ರ ಬರಕೊಡೊಂತಾನೆ! ದುಡ್ಡಿಗೆ ಮಾತ್ರ ಕಪಿಮುಷ್ಟಿ!). . . ಹುಂ, ಸರಿ. ಅವತ್ತು ನಿನ್ನಿಂದ ಇಪ್ಪತ್ತು ರೂಪಾಯಿ ಸಾಲ ತೆಗೆದು ಕೊಂಡಿದ್ದೆನಲ್ಲಾ-ಅದನ್ನ ವಾಪಸು ತೆಗೆದುಕೋ-ನನಗೊಂದು ಐವತ್ತು ಕೊಡು. ಉಳಿದದ್ದನ್ನು ಚಂಪಳ ಕೈಗೆ ಕೊಡು.

ರಾಜ—ಓಹೋ, ಅಗತ್ಯವಾಗಿ. (ಗಿರಿಗೆ ಐವತ್ತು ರೂಪಾಯಿ ಕೊಡುವನು.) ಗುರುಗಳೇ, ಈಚೆಗೆ ನೀವು ಬಹಳ ಬದಲಾಯಿಸಿದ್ದೀರಿ!

ಗಿರಿ—ಏನು ಬದಲಾವಣೆ?

ರಾಜ—ಅಮ್ಮಾವರು ಬದುಕಿದ್ದಾಗ ದುಡ್ಡನ್ನ ಬಲು ಹಿಡಿತದಲ್ಲಿಟ್ಟಿದ್ದಿರಿ. ಹತ್ತುಸರ್ತಿ ಕೇಳಿಸಿಕೊಂಡು ಒಂದುಸಲ ಕೊಡುತ್ತಿದ್ದಿರಿ. ಕೊನೆ ಕೊನೆಗೆ ಅದೂ ನಿಂತುಹೋಗಿತ್ತು. ಆದರೆ ಈಚೆಗೆ ಬಹಳ ಧಾರಾಳ ವಾಗಿದೆ ನಿಮ್ಮ ಕೈ! ವಯಸ್ಸಿಗೂ ಧಾರಾಳಕ್ಕೂ ಏನೋ ಸಂಬಂಧ ವಿರಬೇಕು!

ಗಿರಿ—(ನಗುತ್ತ) ಏನು ಚಂಪಳಿಗೆ ನಲವತ್ತು ರೂಪಾಯಿ ಕೊಡು ಅಂದೆ ನಲ್ಲಾ ಅದಕ್ಕೋ?

ರಾಜ—ಹುಂ.

ಗಿರಿ—ನೋಡು, ರಾಜ—ಎಲ್ಲಿ ಬಲವಂತವಿಲ್ಲವೋ ಅಲ್ಲಿ ಧಾರಾಳ ಹೆಚ್ಚು. ಗಂಡ ಹೆಂಡತಿ ಒಬ್ಬರನ್ನೊಬ್ಬರು ಪ್ರೀತಿಸಬಹುದು. ಆದರೆ ಅದರ ಹಿಂದೆ ಮದುವೆ ಸಂಬಂಧದ ಬಲಾತ್ಕಾರವಿದ್ದೇ ಇದೆ. ಈ ಮದುವೆ ಅನ್ನೋದು, ಸಮಾಜವು ಸುಖವನ್ನು ಹಿಡಿಯೋಕೆ ತಯಾರು ಮಾಡಿದ ಒಂದು ಭ್ರಮೆಯ ಬಲೆ. ಕಟ್ಟಿಹಾಕಿದರೆ ಮನೆ ನಾಯಿಯೂ ಕಿತ್ತುಕೊಂಡು ಹೋಗೋಕೆ ಒದ್ದಾಡುತ್ತೆ; ಕಟ್ಟದೆ ಇದ್ದರೆ ಮನೆ ಬಾಗಿಲಲ್ಲಿ ಬಿದ್ದಿರುತ್ತೆ! ನಾಯಿಗೆ ಸರಪಳಿ ಹೇಗೋ-ಸಮಾಜದಲ್ಲಿ ಈ ಮದುವೆಯ ಬಂಧನ ಹಾಗೆ-

ರಾಜ—ಇದೇನು ಗುರುಗಳೇ, ನಾನು ಏನೋ ಒಂದು ಮಾತಾಡಿದರೆ ನೀವು ಹೆಂಡತಿ-ನಾಯಿ-ಮದುವೆ-ಸರಪಳಿ ಅಂತ ಏನೇನೋ ಹೇಳ್ತೀರಿ!

ಗಿರಿ—ಹೌದೋ ರಾಜ, ಈ ಗಂಡು ಹೆಣ್ಣಿನ ಸಂಬಂಧದಲ್ಲಿ ಮನುಷ್ಯರಿಗೂ-ನಾಯಿಗಳಿಗೂ ಅಷ್ಟೇನೂ ವ್ಯತ್ಯಾಸವಿಲ್ಲ! ಬಂಧನ ಎಲ್ಲಿದೆಯೋ ಅಲ್ಲಿ ಬಲಾತ್ಕಾರವಿದೆ. ಗಂಡೇ ಆಗಲಿ-ಹೆಣ್ಣೇ ಆಗಲಿ-ಗಂಡನೇ ಆಗಲಿ-ಹೆಂಡತಿಯೇ ಆಗಲಿ ನಾಯಿಯೇ ಆಗಲಿ-ನರಿಯೇ ಆಗಲಿ-ಬಲಾತ್ಕಾರವನ್ನು ಎದುರಿಸೋದು ಅವಕ್ಕೆ ಹುಟ್ಟುಗುಣ. ನನ್ನ-ಚಂಪಳ ಸಂಬಂಧದಲ್ಲಿ ಹಿಂದೆ ಇದ್ದ ಬಂಧನ-ಬಲಾತ್ಕಾರವಿಲ್ಲ. ಅದಕ್ಕೇ ನನ್ನಲ್ಲೂ ಬದಲಾವಣೆಯಾಗಿದೆ. ಚಂಪಳು ನನ್ನ ಚಿತ್ರಗಳಿಗೆ ಮಾದರಿ—ಮದುವೆ ಬಂಧನವಿಲ್ಲದ ನನ್ನ ಹೆಣ್ಣು—ಈ ಬಂಧನವಿಲ್ಲದ ಸಂಬಂಧದಲ್ಲಿ ಮದುವೆಗಿಂತ ಹೆಚ್ಚು ಅವಕಾಶವಿದೆ ಪ್ರೀತಿ—ಪ್ರಣಯಗಳಿಗೆ. ನನಗೊಬ್ಬ ಸ್ನೇಹಿತನಿದ್ದ—ಅವನಿಗೆ ಚೆಲುವೆಯಾದ ಹೆಂಡತಿ ಇದ್ದಳು. ಆದರೂ ಅವನು ಬೇರೊಬ್ಬಳಲ್ಲಿ ಸ್ನೇಹ ಬೆಳೆಸಿದ್ದ-ಏಕೆ?-ಮದುವೆಯ ಬಂಧನದ ಹೊರಗೆ ಪ್ರಣಯಕ್ಕೆ ಒಂದು ಹೊಸ ರುಚಿ ಹುಟ್ಟುತ್ತೆ, ಅದಕ್ಕೆ! ಆ ರುಚಿ ಹೃದಯಕ್ಕೆ ಅಫೀಮು. ಪ್ರಣಯವಧುವಿನ ಒಲವಿಗಿಂತ ಹೆಂಡತಿಯ ಪ್ರೀತಿಯೇ ಹೆಚ್ಚು ರುಚಿಯೆಂದು ಹೇಳುವವರು ಯಾರಾದರೂ ಇದ್ದಾರೆಯೇ? ಹೆಂಡತಿಗೂ ಪ್ರಣಯವಧುವಿಗೂ ಇರುವ ವ್ಯತ್ಯಾಸವನ್ನು ತಿಳಿಯದವರ ಮಾತು ನಾನು ಹೇಳುತ್ತಿಲ್ಲ. ಎರಡು ಸಂಬಂಧಗಳಿಗೂ ಬಹಳ ವ್ಯತ್ಯಾಸವಿದೆ. ಹೆಂಡತಿಯೊಡನೆ ನೆಮ್ಮದಿಯಾಗಿ-ತೃಪ್ತನಾಗಿರಬೇಕಾದರೆ ಗಂಡ ಅವಳನ್ನ ಸ್ವಲ್ಪ-(ಎಂದು ಹಲ್ಲುಕಚ್ಚಿ-ಮುಷ್ಟಿ ತೋರುವನು.) ಹೌದು ಅದೇ ಸರಿ ಅವರಿಗೆ! . . . .

(ಚಂಪಳು ಮೆಟ್ಟಿಲುಗಳನ್ನು ಇಳಿದು ಬರುತ್ತಾಳೆ.)

ಚಂಪ—(ಮುಖದಲ್ಲಿ ಹರ್ಷವನ್ನು ಸೂಚಿಸುತ್ತ) ಓಹೋ, ರಾಜ ಯಾವಾಗ ಬಂದೆ?

ರಾಜ—ಬಂದು ಎಷ್ಟೋ ಹೊತ್ತಾಯಿತು.

ಚಂಪ—ಯಾರೋ ಬಂದಿದ್ದರಲ್ಲ-ಅವರು ಹೋದಕೂಡಲೆ ನೀನೂ ಬಂದಿರ

ಬೇಕು-ಅಲ್ಲವೆ? ಹಾಗೇ ಉರುಳಿಕೊಂಡೆ-ನಿದ್ದೆ ಬಂದುಬಿಟ್ಟಿತು-ಎಚ್ಚರವಾಯ್ತು-ನಿನ್ನ ಧ್ವನಿ ಕೇಳಿಸಿತು-ಅವರು ಹೊರಟುಹೋಗಿರಬಹುದೂಂತ ಇಳಿದು ಬಂದೆ.

ರಾಜ—ಇಗೋ ನಿನಗೊಂದಿಷ್ಟು ರೂಪಾಯಿ ಇದೆ.

ಚಂಪ—ಓಹೋ ಕೊಟ್ಟುಬಿಟ್ಟರೋ? . . . . . ನಿನ್ನ ಹತ್ತಿರಲೇ ಇರಲಿ-ಎಲ್ಲಾ ಒಂದೇ.

(ಗಿರಿಯ ಹುಬ್ಬುಗಳು ಸ್ವಲ್ಪಮಾತ್ರ ಗಂಟಾಗಿ ಅವನು ಬೇರೇಕಡೆ ಮುಖ ತಿರುಗಿಸಿಕೊಳ್ಳುತ್ತಾನೆ.)

ರಾಜ—ಉಹುಂ, ಬೇಡ-ನನ್ನ ಹತ್ತಿರ ಇದ್ದರೆ ಎಲ್ಲಾ ಖರ್ಚಾಗಿಬಿಡುತ್ತೆ. ನನ್ನ ಹಣಾನೂ ನೀನೇ ಇಟ್ಟುಕೊಂಡಿರು. (ಹಣವನ್ನು ಕೊಡುವನು.)

ಚಂಪ—(ಹಣವನ್ನು ತೆಗೆದುಕೊಂಡು ಗಿರಿಯನ್ನು ನೋಡುತ್ತ ಮುಗುಳುನಗೆಯಿಂದ) ಹುಂ, ಇನ್ನೇನು, ನಿಮ್ಮ ಕಾಲು ಮನೇಲಿ ನಿಲ್ಲುತ್ತೆಯೇ?-ಜೇಬಿನಲ್ಲಿ ದುಡ್ಡಿರೋತನಕ?-ಇನ್ನೂ ಇಲ್ಲಿ ನಿಂತಿರೋದೇ ಆಶ್ಚರ್ಯ!

ಗಿರಿ—ಹುಂ-ಮ್.

ಚಂಪ—ನೀವು ಹೊರಗೆ ಹೋಗೋದಾದರೆ ನನ್ನದೊಂದು ಪ್ರಾರ್ಥನೆ! ಮೊದಲೆಲ್ಲಾದರೂ ಹೋಗಿ ಕ್ಷೌರ ಮಾಡಿಸಿಕೊಳ್ಳಿ! ನೋಡಲಾರೆ ನಿಮ್ಮ ಅವತಾರಾನ!-ಎರಡು ತಿಂಗಳಾಯಿತೂಂತ ಕಾಣುತ್ತೆ!

ಗಿರಿ—ಆಯ್ತು-ಆಮೇಲೆ?

ಚಂಪ—ಆಮೇಲೆ-ನಾ ಹೇಳಿದ್ದು ಜ್ಞಾಪಕವಿದೆಯೇ?

ಗಿರಿ—ಯಾವಾಗ?

ಚಂಪ—ನೆನ್ನೆ ರಾತ್ರಿ-

ಗಿರಿ—ಏನು?

ಚಂಪ—ಚೆನ್ನಾಯ್ತು! ದೊಡ್ಡಪೇಟೆ ರಾಮುಲಾಲನ ಅಂಗಡೀಲಿ ರೋಜಾ ಬಣ್ಣದ ಸೀರೆಗೆ ಹೇಳಿರಲಿಲ್ಲವೇ? ಅದನ್ನ ನೀವು ತರಲೇಬೇಕು ಇವತ್ತು—ಇವತ್ತು ಬಿಟ್ಟರೆ ಆಮೇಲೆ ನೀವು ತಾರಮ್ಮಯ್ಯನ್ನಾಡ್ತೀರಿ. ಆಮೇಲೆ-ಗೋವಿಂದಾಚಾರೀಗೆ ಬಳೇ ಮಾಡೋಕೆ ಚಿನ್ನ ಕೊಟ್ಟಿತ್ತಲ್ಲ-ವಿಚಾರಿಸಿ-ಆಗಿದ್ದರೆ ತನ್ನಿ-ಹಾಗೇ ಮಾರ್ಕೆಟ್ಟಿಗೆ ಹೋಗಿ ನೋಡಿ ಚೆನ್ನಾಗಿರೋ ಕಿತ್ತಲೆಹಣ್ಣು, ವಿಳ್ಳೇದೆಲೆ ತೆಗೆದುಕೊಂಡು ಬನ್ನಿ.

ಗಿರಿ—ಹುಂ—ಮ್ !

ಚಂಪ—ಮರೆತಿದ್ದೆ !-ಮೈಗೆ ಹಚ್ಚಿಕೊಳ್ಳೋ ಸೋಪು ನಾಲ್ಕು ತನ್ನಿ (ನಗುತ್ತ) ನಿಮಗೆ ಒಂದು ಸಾಕಾಗೊಲ್ಲ-ಮೂರುವಾರದ ಕೊಳೇ ತೊಳೆಯೋಕೆ!

ಗಿರಿ—ಹುಂ—ಸರಿ—ಹೊರಟೆ-ಇಷ್ಟೆಲ್ಲಾ ಮುಗಿಸಿಕೊಂಡು ಬರೋಹೊತ್ತಿಗೆ ಸಾಯಂಕಾಲವೇ ಆಗುತ್ತೆ.

ಚಂಪ—ಹೊರಡಿ ಹಾಗಾದರೆ—ಸಾಬೂನು ಮಾತ್ರ ಮರೀಬೇಡಿ !

ಗಿರಿ—ಸಾಬೂನೂ ಬೇಡ—ಗೀಬೂನೂ ಬೇಡ !—ಏನೂ ಬೇಕಾಗಿಲ್ಲ.

ಚಂಪ—ಯಾಕೇ?-ಮೂರುವಾರದ ಆಸ್ತಿ ತೊಳೆದುಹೋಗುತ್ತೆ ಅಂತಲೋ?- (ಗಿರಿಯು ಕಿವಿಯಮೇಲೆ ಹಾಕಿಕೊಳ್ಳದೆ ಹೊರಟುಹೋಗುತ್ತಾನೆ-ಚಂಪಳು ಅವನು ಹೋದಕಡೆಯೇ ದಿಟ್ಟಿಸಿ ನೋಡುತ್ತಾ ಆಮೇಲೆ ರಾಜನ ಕಡೆಗೆ ತಿರುಗಿ) ರಾಜ, ನಿಮ್ಮ ಗುರುಗಳು ಒಳ್ಳೆ ಪುನುಗಿನ ಬೆಕ್ಕು-ಅಲ್ಲ-ಪುನುಗಿನ ಕರಡಿ !! (ಹೀಗೆಂದು ಹೇಳಿ-ಬಾಗಿಲವರೆಗೂ ಹೋಗಿ ನೋಡಿ ಬಂದು ಸೋಫಾದ ಮೇಲೆ ಕುಳಿತುಕೊಂಡು) ರಾಜ, ನೀನು ಬಹಳ ಹೊತ್ತುಮಾಡಿಬಿಟ್ಟೆ.

ರಾಜ—ಏನು ಹೊತ್ತುಮಾಡಿದೆ ?

ಚಂಪ—ವಾಪಸು ಬರುವುದಕ್ಕೆ—

ರಾಜ—ಏನು ಚಂಪ-ಹೀಗಂತೀಯಲ್ಲ ! ಎಷ್ಟು ಬೇಗ ವಸೂಲು ಮಾಡಿಕೊಂಡು ಬಂದೆ !

ಚಂಪ—ನನಗೇನೋ ಬಹಳ ಹೊತ್ತಾದ ಹಾಗೆ ಕಂಡಿತು. (ಸ್ವಲ್ಪಹೊತ್ತು ಮೌನವಾಗಿದ್ದು) ರಾಜ, ಅವರು ಎಷ್ಟು ದುಡ್ಡು ಇಸಕೊಂಡರು ?

ರಾಜ—ಐವತ್ತು ರೂಪಾಯಿ.

ಚಂಪ—ಸರಿ, ಹಾಗಾದರೆ ಇವತ್ತು ಅವರು ಮನೆ ಸೇರೋಲ್ಲ ! ಕೈಯ್ಯಲ್ಲಿ ದುಡ್ಡಿರೋತನಕ !....ಅವರ ಹುಟ್ಟಿಗೇ ಬಂದದ್ದಲ್ಲ.

ರಾಜ—ನಿಜ- ದುಡ್ಡು ಇಟ್ಟುಕೊಂಡು ಮನೇಲಿ ಕೂತಿದ್ದರೆ ಏನುಬಂತು ?

ಚಂಪ—ನ್ಯಾಯವಾಗಿ ಖರ್ಚುಮಾಡಿದರೆ ಪರವಾಗಿಲ್ಲ—ಸಿಕ್ಕಿಸಿಕ್ಕಿದ್ದಕ್ಕೆ ಪೋಲು ಮಾಡಿದರೆ ?—ಇನ್ನು ಎಷ್ಟು ಸ್ನೇಹಿತರಿಗೆ ಎಷ್ಟು ಹೋಟಲು ಗಳಲ್ಲಿ ತಿಂಡಿತೀರ್ಥ ಆಗಬೇಕೋ ನಾಕಾಣೆ. ನೋಡು ಬೇಕಾದರೆ

ನಾನು ಪಂಥ ಕಟ್ಟುತೀನಿ—ಅವರು ಬೇರೆ ಇವತ್ತು ರಾತ್ರಿ ಖಂಡಿತ ಮನೆಗೆ ಬರೊಲ್ಲ.

ರಾಜ—ಎಲ್ಲಾದರೂ ಉಂಟೆ!....ಅವರು ಮೊದಲಿಗೂ ಈಚೆಗೂ ಬಹಳ ಬದಲಾಯಿಸಿ ಬಿಟ್ಟಿದ್ದಾರೆ—ಮೊದಲು ಮನೆ ಅಂದರೆ ಅವರಿಗೆ ಆಗುತ್ತಿರಲಿಲ್ಲ ; ಎಲ್ಲೋ ಹೋಗುತ್ತಿದ್ದರು—ಯಾವಾಗಲೋ ಬರುತ್ತಿದ್ದರು-ಎಲ್ಲಾ ಹುಚ್ಚುಹುಚ್ಚು. ಆದರೆ ಈಗ ಹಾಗಿಲ್ಲ—ಬಹಳ ಬದಲಾಯಿಸಿದ್ದಾರೆ.

ಚಂಪ—ಏನು ಬದಲಾವಣೆ?

ರಾಜ—ನಿನ್ನ ಕಂಡರೆ ಬಹಳ ಮಮತೆ ಅವರಿಗೆ—ಅವರೇ ಹೇಳಿದರು.

ಚಂಪ—(ಎದ್ದು ಅವನ ಸಮೀಪಕ್ಕೆ ಬಂದು) ಆಹಾ ?-ಏನು ಹೇಳಿದರು ರಾಜ?

ರಾಜ—ಅವರಿಗೆ ಹೆಂಡತೀಲಿ ಇದ್ದದ್ದಕ್ಕಿಂತ ನಿನ್ನಲ್ಲಿ ಮೋಹ ಹೆಚ್ಚಂತೆ.

ಚಂಪ—ಬಡಕೊಂಡರು!—ಈ ಕರಡೀ ಮೋಹಕ್ಕೆ!! (ಮತ್ತೆ ಸೋಫಾದ ಮೇಲೆ ಕುಳಿತುಕೊಳ್ಳುವಳು.)

ರಾಜ—ಲೇ ಚಂಪಾ, ಎಂಥಾ ಮಾತಾಡ್ತೀಯೋ!

ಚಂಪ—ದಿನಾ ಸರಪಳೀಲಿ ಒಂದೊಂದು ಗಂಟೆ ಬಿಗಿಯೋದು ಎಂಥಾ ಮೋಹ!—ಸುಡುಗಾಡು ಮೋಹ!!

ರಾಜ—ಏನು ಬೇಕಂತ ಮಾಡ್ತಾರೆಯೇ?—ಚಿತ್ರಕ್ಕೋಸ್ಕರ—ಅಷ್ಟೆ.

ಚಂಪ—ಅವರ ಚಿತ್ರ ಹಾಳಾಯ್ತು,—ನನ್ನ ಮೈ ಕೈ ಹ್ಯಾಗಾಗಿದೆ ಗೊತ್ತೇನು?

ರಾಜ—(ನಗುತ್ತ) ನನಗೆ ಹೇಗೆ ಗೊತ್ತಾಗಬೇಕು?—ನಿನ್ನ............

ಚಂಪ—ಏನಂದೆ?

ರಾಜ ಏನೂ ಇಲ್ಲ.

ಚಂಪ—ಅದೇನೋ ಹೇಳಿದೆಯಲ್ಲ-ಬಾ ಇಲ್ಲಿ—(ರಾಜ ಸ್ವಲ್ಪ ಹತ್ತಿರ ಹೋಗುವನು.) ಅವರು ಹೆಂಡತೀಗೂ ಹೀಗೇ ಮಾಡುತ್ತಿದ್ದರು ಅಂದೆಯಲ್ಲ ಅದ್ಯಾಕೆ?

ರಾಜ—ಇಷ್ಟೇ ಮಾಡುತ್ತಿದ್ದರೆ!—ಇದಕ್ಕೆ ನೂರರಷ್ಟು!!

ಚಂಪ—ಯಾಕೆ?

ರಾಜ—ಯಾಕೇ-ಅಂದರೆ ನಾನು ಏನು ಬಲ್ಲೆ?—ನಾನು, ಅವರು ಸಾಯೋದಕ್ಕೆ ಒಂದು ವರ್ಷ ಮುಂಚೆ ಇವರ ಹತ್ತಿರ ಕೆಲಸ ಕಲಿಯೋಕೆ ಬಂದೆ. ಆಗಲೂ ಇದೇ ಚಿತ್ರಗಳನ್ನು ಬರೀತಿದ್ದರು. ಅವರನ್ನ ಕಟ್ಟಿಹಾಕುತ್ತಿದ್ದುದೇನು ಆಶ್ಚರ್ಯವಲ್ಲ-ಚಿತ್ರಗಳ ಮಾದರಿಗೆ ಅದೆಲ್ಲಾ ಮಾಡಬೇಕಾಗುತ್ತೆ—ಆದರೆ ಅವರ ಹಿಂಸೆ ಬಹಳವಾಗಿತ್ತಂತೆ.

ಚಂಪ—"ಇತ್ತಂತೆ"—ಅಂದರೆ—ನೀನು ನೋಡುತ್ತಿರಲಿಲ್ಲವೆ?

ರಾಜ—ಇಲ್ಲ—ನಾನು ಆಗ ಗುರುಗಳ ಹತ್ತಿರ ಇಷ್ಟು ಬಳಕೇಲಿ ಇರಲಿಲ್ಲ. ಯಾವಾಗಲಾದರೂ ನಾನೊಬ್ಬನೇ ಸಿಕ್ಕಾಗ-ಹೇಳಿಕೊಂಡು ಕಣ್ಣೀರು ಹಾಕುತ್ತಿದ್ದರು–ಯಮಹಿಂಸೆ ಮಾಡುತ್ತಿದ್ದರಂತೆ!—ಮೈಮೇಲೆಲ್ಲಾ ಗಾಯ!

ಚಂಪ—ಆಹಾ!-ನಿಂಗೆ ಹೇಗೆ ಗೊತ್ತಾಯ್ತು? (ನಗುವಳು.)

ರಾಜ—ಛಿ! ನೀನೊಬ್ಬಳು ನಾಚಿಕೆಕೆಟ್ಟವಳು!....ಪಾಪ, ಒಂದು ದಿನ-ತೋಳಿನ ಮೇಲೆ ಇವರು ಕಚ್ಚಿದ್ದನ್ನ ತೋರಿಸಿದರು-ಎಂಥಾ ಗಾಯ!-ಒಂದು ತಿಂಗಳಾಯಿತು ವಾಸಿಯಾಗೋಕೆ!

ಚಂಪ—ಕರಡಿ—ಕಚ್ಚತ್ತೋ—ಪರಚತ್ತೋ—ರಾಜ!—

ರಾಜ—ನಿನಗೆ ಹ್ಯಾಗೆ ಗೊತ್ತಾಗಬೇಕು ಹೇಳು?—ನೀನೂ ಹೆಂಡತಿಯಾಗಿದ್ದರೆ-ಆಗ ಗೊತ್ತಾಗುತ್ತಿತ್ತು!

ಚಂಪ—ಹ್ಞೂ!-ಇನ್ನು ಹೆಂಡತಿ ಆಗಿ ಮುಂಡಮೋಚಿಕೋ ಬೇಕಾಗಿತ್ತು!

ರಾಜ—ಇಷ್ಟಾದರೂ ನೋಡು ಆಕೆ ತುಟಿ ಪಿಟಕ್ಕೆನ್ನದೆ ಎಲ್ಲಾ ಸಹಿಸಿಕೊಂಡಿರೋರು-ಅದೆಂತಹಾ ತಾಳ್ಮೆಯೋ ನಾ ಬೇರೇ ಕಾಣೆ. ನನ್ನಲ್ಲಿ ಆಕೆಗೆ ಬಹಳ ವಿಶ್ವಾಸ-ನಂಬಿಕೆ. ಸಮಯ ಸಿಕ್ಕಾಗ ಎಲ್ಲಾ ಬಿಚ್ಚಿ ಹೇಳಿ ಕೊಳ್ಳೋರು; ಕೇಳಿ ಸಂಕಟವಾಗೋದು.

ಚಂಪ—ಊಹುಂ? ಬಿಚ್ಚಿ ಹೇಳಿಕೊಳ್ತಿದ್ದರೋ? ಹಾಗಾದರೆ ನಿಮ-ನಿಮಗೆ ಬಹಳ ಏಕಾಂತ ನಡೀತಿತ್ತು?

ರಾಜ—ಸರಿ!-ನಿನಗಿನ್ನೇನು ಯೋಚನೆ ಹೇಳು?

ಚಂಪ—(ಅವನನ್ನು ಎಳೆದು ಹತ್ತಿರ ಕುಳಿತುಕೊಳ್ಳುವಂತೆ ಬಲವಂತಮಾಡುತ್ತ) ಲೇ ಕಳ್ಳಾ! ನನ್ನ ಹತ್ತಿರ ಹೇಳು ಪರವಾಗಿಲ್ಲ!

ರಾಜ—ನೀನು ಶುದ್ಧ ಭಂಡಳು. (ಎಂದು ಸೋಫಾದ ಮೇಲೆ ಕುಳಿತು ಕೊಳ್ಳುವನು.)

ಚಂಪ—ಹೀಗೆ ಮಾತು ಮರೆಸೋಕೇನು?

ರಾಜ—ಲೇ ಆಕೆ ನನಗಿಂತ ಕೊನೇಪಕ್ಷ ಹತ್ತು ವರ್ಷ ಹಿರಿಯರಾಗಿದ್ದರು- ನನಗೆ ತಾಯಿಾ ಸಮಾನ!

ಚಂಪ ಓಹೋ! ಹಾಗೋ?........(ನಗುತ್ತ) ಈಗ ನಿನಗೆ ಎಷ್ಟುವರ್ಷ?

ರಾಜ—ಇಪ್ಪತ್ತೆಂಟು.

ಚಂಪ—ನನಗೆಷ್ಟು—ಗೊತ್ತೆ?—ರಾಜ? (ಅವನನ್ನು ಉದ್ರೇಕಿಸುವ ದೃಷ್ಟಿ ಯಿಂದ ನೋಡುವಳು.)

ರಾಜ—(ಅನ್ಯಮನಸ್ಕತೆಯಿಂದ) ಇಲ್ಲ.

ಚಂಪ—ಇಪ್ಪತ್ತನಾಲ್ಕು

ರಾಜ—(ಅದೇ ಅನ್ಯಮನಸ್ಕತೆಯಿಂದ) ಸರಿ.

ಚಂಪ—ಸರಿಯೋ? ಇಪ್ಪತ್ತೆಂಟು—ಇಪ್ಪತ್ತನಾಲ್ಕು?

ರಾಜ—ಏನಂದೆ?

ಚಂಪ—ರಾಜ! (ಅವನ ಕೈಹಿಡಿದು) ಇವತ್ತು ನೀನು ಸ್ವಲ್ಪವೂ ಸರಿಯಾಗಿಲ್ಲ.

ರಾಜ—ಚಂಪಾ, ಈಗ ನನ್ನ ಪೀಡಿಸಬೇಡ—ನನಗೆ ಬಹಳ ಕೆಲಸ ಇದೆ. ಆ ಸಾವುಕಾರನ ಮಗೂಚಿತ್ರ ಮುಗಿಸಿ ಬಿಡಬೇಕು—ಇಲ್ಲದೆ ಇದ್ದರೆ ದುಡ್ಡಿಗೇ ತಾಪತ್ರಯ. (ಎಂದು ಏಳಲು ಹೋಗುವನು.)

ಚಂಪ—(ಅವನನ್ನು ಏಳುವುದಕ್ಕೆ ಬಿಡದೆ) ರಾಜ ರಾಜ, ನೀನು ಬಹಳ ಕಲ್ಲೆದೆ ಯುವನೋ!........ರಾಜ, ನಾನು ಇಲ್ಲಿಂದ ತಲೆತಪ್ಪಿಸಿಕೊಂಡು ಹೋಗಿ ಎಷ್ಟೋ ದಿನವಾಗಬೇಕಾಗಿತ್ತು!....ನಾನಿರೋದ್ಯಾಕೆ ಇಲ್ಲಿ— ಗೊತ್ತೆ?

ರಾಜ—ಇಂಥಾ ಮನೆ-ಅನ್ನ-ಬಟ್ಟೆ ಎಲ್ಲಾ ಬಿಟ್ಟು ಹೋದರೆ ಹುಚ್ಚಿ ಅಂತಾರೆ!

ಚಂಪ—ನಾಯಿ ಜನ್ಮಕ್ಕಿಂತ ಹುಚ್ಚಿ ಜನ್ಮ ಲೇಸು!

ರಾಜ—ನಿನಗೇನು ಅಂಥಾದ್ದು ಆಗಿರೋದು?

ಚಂಪ—ಏನು ಅಂಥಾದ್ದೇ?—ನನ್ನ ಮೈಮೇಲೆಲ್ಲಾ ಸರಪಳಿಗುರುತು! ಆಹಾ! ನಿನ್ನ ಗುರುಗಳೊ!!—ಹೇಳಿದೆನಲ್ಲ!| ಪುನುಗಿನ ಕರಡಿ!!—

ನೀನು ಅವರಿಂದ ಏನು ಬೇಕಾದರೂ ಕಲಿತುಕೋ--ಅವರ ಆ ಶ್ವಪಚತನ....ಗಲೀಜುತನ ಕಲೀಬೇಡ! ಅವರ ಉಸಿರು ವಿಷ!—ಅಂಥಾ ಕೆಟ್ಟ ವಾಸನೆ!!.... ...ಹುಂ! ಮೊದಲು ತಿಳೀಲಿಲ್ಲ........ಆ ಮೇಲೆ ಹೋಗೋಕಾಗಲಿಲ್ಲ.

ರಾಜ—ಯಾಕೆ?

ಚಂಪ—ಯಾಕೆ?........ಯಾಕೆ ಹೇಳು ರಾಜ?—ನಿಂಗೊತ್ತಿಲ್ಲವೆ?

ರಾಜ—ಇಲ್ಲ....ಬಿಡು ಚಂಪ, ನಾನು ಕೆಲಸಕ್ಕೆ ಶುರುಮಾಡಬೇಕು.

ಚಂಪ—ಇಲ್ಲ!—ಬೇಕಾದ್ದಾಗಲಿ ಇವತ್ತು ನಿನ್ನ ಬಿಡೊಲ್ಲ! (ಅವನ ತೋಳನ್ನು ತನ್ನ ಎರಡು ಕೈಗಳಿಂದಲೂ ಭದ್ರವಾಗಿ ಹಿಡಿದುಕೊಳ್ಳುತ್ತಾಳೆ.)

ರಾಜ—ಇದೇನೇ ಚಂಪಾ, ಇಷ್ಟು ಒರಟುತನ ನಿನ್ನದು!

ಚಂಪ—ಮೊನ್ನೆ ರಾತ್ರೆ ನೀನು ಮನೆಗೆ ಬಂದಾಗ ಒಂದು ಗಂಟೇಮೇಲಾಗಿತ್ತು; ಅಷ್ಟು ಹೊತ್ತಿನ ತನಕ ಎಲ್ಲಿಗೆ ಹೋಗಿದ್ದೆ ನೀನು?

ರಾಜ—ಇದೇನು ಹೀಗೆ ಕೇಳುತ್ತೀ?—ಯಾರೋ ಒಬ್ಬ ಸ್ನೇಹಿತರ ಮನೆಗೆ ಹೋಗಿದ್ದೆ.

ಚಂಪ—ಎಲ್ಲಿ ಅವರ ಮನೆ?

ರಾಜ—ಸೇತುವೆ ಆಚೆ ಹೊಸ ಬಡಾವಣೆಯಲ್ಲಿ.

ಚಂಪ—ಯಾರು ಅವರು!

ರಾಜ—"ಕಲಾಲೋಕ" ಅಂತ ಇಲ್ಲಿಗೊಂದು ಮಾಸಪತ್ರಿಕೆ ಬಂದಿಲ್ಲವೆ?—ಅವರ ಸಂಪಾದಕರು ಕುಮಾರಶರ್ಮ ಅಂತ.

ಚಂಪ—ಸರಿ; ಆದರೆ ಅದ್ಯಾಕೆ ಅಷ್ಟು ಹೊತ್ತಾಯ್ತು?—ರಾತ್ರೆ ಒಂದು ಗಂಟೆ!

ರಾಜ—ಹೌದು-ಅವರ ಮನೇಲಿ ಅವತ್ತು ರಾತ್ರಿ ಭಾರಿ ಊಟ-ಆಮೇಲೆ-ಎಲೆಅಡಿಕೆ-ಮಾತುಕಥೆ ಎಲ್ಲಾ ಮುಗೀಬೇಕಲ್ಲ!

ಚಂಪ—ನೀನು ಸುಳ್ಳು ಹೇಳುತ್ತಿದ್ದೀಯೋ ನಿಜ ಹೇಳುತ್ತಿದ್ದೀಯೋ ಪರೀಕ್ಷೆ ಮಾಡ್ತೀನಿ!

ರಾಜ—ಹೇಗೆ?

ಚಂಪ—ನಿನ್ನೆದೆ ಮೇಲೆ ಕಿವಿ ಇಟ್ಟು ಕೇಳಿದರೆ-ನೀನು ಸುಳ್ಳು ಹೇಳುತ್ತಿದ್ದರೆ ಡವ-ಡವ ಅಂತ ಹೊಡಕೊಳ್ಳುತ್ತೆ!

ರಾಜ—ಪರೀಕ್ಷೆಮಾಡು.

ಚಂಪ—(ಅವನ ಎದೆಯ ಮೇಲೆ ಕಿವಿಯಿಟ್ಟು ಕಣ್ಣು ಮುಚ್ಚಿಕೊಂಡು ಮುಗುಳು ನಗೆ ನಗುವಳು.)

ರಾಜ—ಗೊತ್ತಾಯ್ತೆ ?

ಚಂಪ—ಡವ-ಡವ ಅಂತಿದೆ !

ರಾಜ—ಯಾಕೆ ಗೊತ್ತೆ ?

ಚಂಪ—ನೀನು ಸುಳ್ಳು ಹೇಳುತ್ತಿದ್ದೀ-ಅದಕ್ಕೆ !

ರಾಜ—ಅದಕ್ಕಲ್ಲ.

ಚಂಪ—ಮತ್ತೆ ?

ರಾಜ—ನೀನು ನನ್ನೆದೆ ಮೇಲೆ ತಲೆ ಇಟ್ಟದ್ದೀಯೆ ಅದಕ್ಕೆ.

ಚಂಪ—ಓ-ಹಾಗೋ-ಹಾಗಾದರೆ ಇನ್ನೂ ಸ್ವಲ್ಪ ಕೇಳ್ತೀನಿ !

ರಾಜ—ಚಂಪ, ಏಳು-ಸಾಕು ನಿನ್ನ ಹುಡುಗಾಟ !

ಚಂಪ—ರಾಜ, ನಿನಗೊಂದು ಕಾಗದ ಬಂದಿತ್ತು !

ರಾಜ—ಎಲ್ಲಿ ? ಯಾವತ್ತು ?

ಚಂಪ—ನೆನ್ನೆ ಬಂತು.

ರಾಜ—ನನಗೆ ಮೊದಲೇ ಏಕೆ ಕೊಡಲಿಲ್ಲ ?-ಎಲ್ಲಿ ತಾ.

ಚಂಪ—ಯಾರೋ ಹೆಂಗುಸು ಬರೆದಿದ್ದಾಳೆ !

ರಾಜ—ನೀನು ಒಡೆದು ನೋಡಿದೆಯಾ ? (ಚಂಪಳು ಮೌನವಾಗಿರುತ್ತಾಳೆ. ರಾಜ ಚಂಪಳ ತಲೆಯನ್ನು ಮೇಲಕ್ಕೆತ್ತಿ) ಚಂಪಾ, ನೀನೇಕೆ ನನ್ನ ಕಾಗದಪತ್ರ ನೋಡುತ್ತಿ ?

ಚಂಪ—ನೋಡಿದರೇನಾಯ್ತು ?

ರಾಜ—ನನ್ನ ಕಾಗದ ಇನ್ನೊಬ್ಬರು ನೋಡಕೂಡದು !

ಚಂಪ—ರಾಜ, ರಾಜ, (ಹತ್ತಿರ ಸರಿದು) "ನಾನು ಇನ್ನೊಬ್ಬಳೆ" ನಿನಗೆ ?- ಹೇಳು ರಾಜ.

ರಾಜ—ಹೌದು !-ನೀನು ಮಾಡಿದ್ದು ಬಹಳ ತಪ್ಪು !-ಹೋಗು-ಇನ್ನು ಮೇಲೆ ನಿನ್ನ ಮಾತಾಡಿಸೊಲ್ಲ ! (ಏಳುತ್ತಾನೆ.) ಕಾಗದ ಕೊಡು !

ಚಂಪ—(ದುಃಖದಿಂದ) ರಾಜ ! ರಾಜ ! ನಿನ್ನ ಪರೀಕ್ಷೆ ಮಾಡೋಣಾಂತ

ಸುಳ್ಳು ಹೇಳಿದೆ-ಹಾಗದವೂ ಇಲ್ಲ-ಗೀಗದವೂ ಇಲ್ಲ !........ಹೋಗು ನಿಂದೆಲ್ಲಾ ಗೊತ್ತಾಯಿತು ! (ಮುಖ ಮುಚ್ಚಿಕೊಂಡು ಅಳುತ್ತಾಳೆ.)

ರಾಜ—(ಪುನಃ ಕುಳಿತುಕೊಂಡು) ಚಂಪಾ, ಸುಳ್ಳು ಹೇಳಿ ಪರೀಕ್ಷೆ ಮಾಡ ಬೇಕೇ ನನ್ನ ?

ಚಂಪ—ಹೋಗು !-ನನ್ನ ಮಾತಾಡಿಸಬೇಡ !-ನಾನಿವತ್ತೇ ಸಾಯ್ತೀನಿ !

ರಾಜ—ಬಿಡು ಬಿಡು ಚಂಪ,-ಇದೆಲ್ಲಾ ಏನು?-ನೀನೂ ಹುಡುಗಾಟ ಮಾಡಿದೆ-ನಾನೂ ಹುಡುಗಾಟ ಮಾಡಿದೆ ! ಅದಕ್ಕದಕ್ಕೆ ಊಫಿ ! ಏಳು, ಇ-ದ-ಕ್ಕೆ-ಲ್ಲಾ ಕಣ್ಣೀರು ಹಾಕ್ತೀಯಲ್ಲ ! (ಚಂಪಳು ಮಾತಾ ಡುವುದಿಲ್ಲ) ಏಳೇ, ಇದೇನೆ, ಮಾತೇ ಆಡೊಲ್ಲ?

ಚಂಪ—ನೀನೇ ಹೇಳಿದೆ-ಮಾತಾಡಿಸೊಲ್ಲಾಂತ !

ರಾಜ—ಅದೆಲ್ಲಾ ಮರೆತುಬಿಡು !

ಚಂಪ—ಊ !—ಮ-ರೆ-ತುಬಿಡು !-ರಾಜ, ನಿನ್ನಿಂದ-ಆ ಕರಡಿಹಿಂಸೆ-ಅಸಹ್ಯ-ಮರೀತಿದ್ದೆ-ಈಗ ನೀನೂ ಹೀಗಾಗಿಬಿಟ್ಟರೆ ಇನ್ಯಾರು........ (ಅವನ ಭುಜದಮೇಲೆ ತಲೆಯನ್ನಿಟ್ಟು ನಿಟ್ಟುಸಿರು ಬಿಡುವಳು.)

(ಬಾಗಿಲ ಹೊರಗೆ ಏನೋ ಸದ್ದಾಗುವುದು. ಇಬ್ಬರೂ ಸ್ವಲ್ಪ ದೂರ ಸರಿಯುತ್ತಾರೆ. ಗಿರಿ ಪ್ರವೇಶಿಸುತ್ತಾನೆ. ಹೊರಟಾಗ ಹೇಗಿದ್ದನೋ ಈಗಲೂ ಹಾಗೇ ಇದ್ದಾನೆ-ರೂಪ-ವೇಷಗಳಲ್ಲಿ. ಮುಖದಲ್ಲಿ ನೋವು-ಕೋಪಗಳ ಸಮರವಾಗುತ್ತಿದೆ. ಬಂದವನೇ ಸೊಂಟದಮೇಲೆ ಕೈ ಇಟ್ಟುಕೊಂಡು, ಭೀಷಣವಾದ ಮೌನದಲ್ಲಿ ಇಬ್ಬರನ್ನೂ ಬಿರುನೋಟದಿಂದ ನೋಡುತ್ತಾನೆ. ರಾಜನದು ಧಿಕ್ಕಾರದ ಮೌನ).

ಚಂಪ—(ದಿಗ್ಭ್ರಮೆಯಿಂದ) ಇದೇನು ?........ಇಷ್ಟು ಬೇಗ !........ಬರೀ ಕೈಲಿ ?........ಸೀರೆ !........ಬಳೆ !........(ಗಿರಿ ಮೌನ. ಅದೇ ನೋಟ-ಅದೇ ಭಂಗಿ) ಅಕ್ಕಸಾಲೆ ಏನಂದ ?........ಸ್ನಾನ ಮಾಡ್ತೀರೇನು ? ........ಸೋಪು ತಂದಿರಾ ? (ಗಿರಿ ನೀರವ) ಇದೇನಿದು ?-ಇದ್ದಕ್ಕಿದ್ದ ಹಾಗೇ !............ಏನಾಗಿದೆ ನಿಮಗೆ ?............ಏನೋ ವಿಚಿತ್ರ ! (ನಗಲು ಪ್ರಯತ್ನಪಡುತ್ತಾಳೆ. ಗಿರಿ ಹಟತೊಟ್ಟ ಮೌನದಲ್ಲಿದ್ದಾನೆ. ರಾಜ ಮಹಡಿ ಮೆಟ್ಟಿಲುಕಡೆ ಹೋಗುತ್ತಾನೆ).

ಗಿರಿ—(ರಾಜನನ್ನು ನೋಡುತ್ತ ಹಲ್ಲು ಕಚ್ಚಿ) ನಿಲ್ಲು!

ರಾಜ—(ನಿಂತು ಗಂಭೀರ ಧ್ವನಿಯಿಂದ) ಏನು?

(ಗಿರಿಯು ಆವನ ಕಡೆಗೆ ರಭಸದಿಂದ ನುಗ್ಗಿ ಹಠಾತ್ತಾಗಿ ಎರಡು ಮೂರು ಏಟುಗಳನ್ನು ಕೊಡುತ್ತಾನೆ. ರಾಜ ಆವನನ್ನು ತಳ್ಳುತ್ತಾನೆ. ಗಿರಿ ಕೆಳಗುರುಳಿ ಒಂದು ಕ್ಷಣದಲ್ಲಿ ಎದ್ದು ಪುನಃ ಆವನ ಮೇಲೆ ಎರಗಿ ಆವನ ಕುತ್ತಿಗೆಗೆ ಕೈಹಾಕುತ್ತಾನೆ-ರಾಜ ಗಿರಿಯ ತೋಳುಗಳನ್ನು ಬಲವಾಗಿ ಹಿಡಿದುಕೊಳ್ಳುತ್ತಾನೆ.)

ರಾಜ—ಏನು?- ಏನಿದರರ್ಥ?

ಗಿರಿ—ಅರ್ಥ!- ಅರ್ಥವೇ? ಹೇಳ್ತೀನಿ ಅರ್ಥ ಕೇಳು! (ಎಂದು ಒದೆಯುವನು. ಈ ಕಾದಾಟವನ್ನು ನೋಡಿ ಚಂಪಳು ದಿಗ್ಭ್ರಾಂತಳಾಗಿದ್ದಾಳೆ. ಕೈ ಕೈ ಹಿಸುಕಿಕೊಳ್ಳುತ್ತ ಮುಖದಲ್ಲಿ ಸಂಕಟವನ್ನು ತೋರುತ್ತ-ಗಿರಿಯ ಸಮೀಪಕ್ಕೆ ಹೋಗಿ ಆವನನ್ನು ಎಳೆಯುತ್ತ)

ಚಂಪ ಇದೇನು ಬಂತು ಇವತ್ತು ನಿಮಗೆ!-ಇದೇನು ಆರ್ಭಟ ಆವೇಶ! (ಗಿರಿ ಆವಳ ಮಾತನ್ನು ಲಕ್ಷಿಸದೆ ರಾಜನನ್ನು ಕೆಳಗೆ ಕೆಡವಿಕೊಂಡು ಗುದ್ದುತ್ತಾನೆ. ಇಬ್ಬರೂ ಕಾದಾಡುತ್ತಾರೆ) ಅಯ್ಯೋ! ಇವತ್ತೇನೋ ಬಂದಿದೆ ಬರಬಾರದ್ದು—ಇವರಿಗೆ! ಅಯ್ಯೋ! ಖೂನಿ!-ಖೂನಿ!-ರಾಜ ಸಾಯಿಸ್ತಾನೆ! (ಗಿರಿ ಮತ್ತೆ ಸಂದಿಯಲ್ಲಿ ಇದ್ದ ಒಂದು ಬಣ್ಣದ ಮಡಿಕೆಯನ್ನು ತೆಗೆದುಕೊಂಡು ರಾಜನ ತಲೆ ಮೇಲೆ ಕುಟ್ಟುತ್ತಾನೆ. ಮಡಕೆ ಚೂರು ಚೂರಾಗಿ ರಾಜನ ತಲೆ ಒಡೆದು ರಕ್ತ ಬರುತ್ತದೆ. ಚಂಪಳು ಇದನ್ನು ನೋಡಿ ತಡೆಯಲಾರದೆ ಹಿಂದಿನಿಂದ ಗಿರಿಯ ಮೇಲೆ ಬಿದ್ದು ಆವನನ್ನು ಹಿಂದಕ್ಕೆಳೆಯಲು ಪ್ರಯತ್ನಿಸುತ್ತಾಳೆ.)

ಗಿರಿ—(ಬುಸುಗುಟ್ಟುತ್ತ ಎದ್ದು, ನಿಧಾನವಾಗಿ ಏಳುತ್ತಿದ್ದ ರಾಜನನ್ನು ನೋಡುತ್ತ-ಹಲ್ಲುಕಚ್ಚಿ-ಉತ್ಕಟ ಕೋಪದಿಂದ) ಹೊಲೆಯ!-ಹೊಲೆಯ!! ಹರಾಮು ಖೋರ!!!

ಚಂಪ—(ಉದ್ವೇಗದಿಂದ) ರಾಜ, ಹೋಗೋ! ಬೇಗ ಹೋಗೋ!! ಇಲ್ಲಿರ ಬೇಡ ಹೋಗು!

ಗಿರಿ—ತೊಲಗೋ! ನಾಯಿಮಗನೆ! ತೊಲಗಾಚೆ! ಇತಃಪರಃ ಈ ಮನೆ ಒಳಗೆ ಕಾಲಿಟ್ಟರೆ-ತಿಗಣೆ!-ತಿಗಣೆ!-ತಿಕ್ಕಿದ ಹಾಗೆ ತಿಕ್ಕಿಬಿಡ್ತೀನಿ!

(ಎಂದು ಕಾಲು ಬೆರಳಿಂದ ನೆಲವನ್ನು ಉಜ್ಜಿ ಮಾತನ್ನು ಅನುಕರಿಸುವನು. ರಾಜ ಕದಲದೆ ಗಿರಿಯ ನೋಟಕ್ಕೆ ನೋಟ ಬೆರೆಸಿ ನಿಂತಿದ್ದಾನೆ. ಅವನ ಮುಖದಲ್ಲಿ ಕಾರ್ಮುಗಿಲು ಕೂಡಿ ನಿಂತಿದೆ.)

ಚಂಪ—ಅಲ್ಲಾ !-ಇದೇನು ಹುಚ್ಚು ?........ನೀವೇನೋ ತಪ್ಪು ತಿಳಿದು ಕೊಂಡಿರೋ ಹಾಗಿದೆಯಲ್ಲ ?........ಹೀಗಾದರೆ ಚೆನ್ನಾಯ್ತು !

ಗಿರಿ—(ಸೊಂಟದಮೇಲೆ ಕೈಯಿಟ್ಟು-ಚಂಪಳನ್ನೇ ದಿಟ್ಟಿಸಿ ನೋಡುತ್ತ) ಊ ಹುಂ ? ತಪ್ಪು ತಿಳಿದುಕೊಂಡಿರೋದೆ ?-ತಪ್ಪುತಿಳಿದುಕೊಂಡಿರೋ ದಲ್ಲ-ನಿನ್ನ ತಪ್ಪನ್ನ ತಿಳಿದುಕೊಂಡೆ !-ವಿಶ್ವಾಸಘಾತಕಿ !

ಚಂಪ—ಸಾಕು !—ಸಾಕು ! ಬಿಡಿ !! ನಿಮ್ಮ ಅನುಮಾನಕ್ಕೆ ಬೆಂಕಿಬಿದ್ದು ಹೋಗ ! . . . . ತಲೆ ನರೆತರೂ ನಾಚಿಕೆ ಬರಲಿಲ್ಲವಲ್ಲ ! (ಗಿರಿ ಅವಳ ಕೆನ್ನೆಗೆ ಬಲವಾಗಿ ಏಟು ಕೊಡುವನು. ಅವಳು ಗಟ್ಟಿಯಾಗಿ ಕೂಗುತ್ತ ಕೆಣಕಿದ ಸಿಂಹಿಯಂತೆ-ಹೆಡೆ ಬಿಟ್ಟ ಸರ್ಪದಂತೆ- ವಿಸ್ಫಾರಿತ ನೇತ್ರಗಳಿಂದ) ಎಷ್ಟು ಧೈರ್ಯವೋ ನಿನಗೆ-ನನ್ನ ಹೊಡೆಯೋಕೆ ? ನಾಚಿಕೆಗೆಟ್ಟ ಧೈರ್ಯ ! ....ಏನು ಬಿಟ್ಟೇ ಬಿದ್ದು ಹೋದೆನೋ....ಇದೆಲ್ಲಾ ಕಟ್ಟಿಟ್ಟು ಬಿಡು !

ಗಿರಿ—ಊ ಹೂಂ ?.... ...ಕಟ್ಟಿಡ್ತೀನಿ !- ಕಟ್ಟಿಡ್ತೀನಿ ! ಸ್ವಲ್ಪ ನಿಧಾನಿಸು !

ಚಂಪ—ನಾಚಿಕೆಯಾಗೊಲ್ಲವೆ ?-ಹೆಣ್ಣು ಹೆಂಗಸಿನಮೇಲೆ ಕೈಮಾಡೋಕೆ?- ಥೂ !-ಥೂ !-ಥೂ !!

ಗಿರಿ—(ಉನ್ಮತ್ತನಾಗಿ ನಗುತ್ತ) ಹ ಹ್ಹ ಹ ಹ್ಹಾ ! ನಿಜ ! ನಿಜ ! ಪಿಶಾಚಿ ! ನಿನ್ನ ಕೈಯಿಂದ ಮುಟ್ಟಕೂಡದು ! ಕಾಲೇ ಸರಿ ! (ಒದೆಯುವನು.)

ಚಂಪ—(ನೋವಿನಿಂದ) ಅಯ್ಯೋ ! . . . (ಉದ್ವೇಗದಿಂದ) ನಿನ್ನ ಕಾಲು ಸೇದಿಹೋಗ-ಮುದಿಗೂಬೆ !-ನಿನ್ನ ಮನೆ ಹಾಳಾಗ !!

ಗಿರಿ—(ಚಂಪಳ ಮುಂದಲೆ ಜಗ್ಗಿಸಿ-ದೂರಕ್ಕೆ ತಳ್ಳಿ) ಹುಂ !-ನನ್ನ ಅನ್ನ !-ನನ್ನ ಬಟ್ಟೆ !-ನನ್ನ ಹಾಸಿಗೆ !-ಎಲ್ಲಕ್ಕೂ ದ್ರೋಹಮಾಡಿದೆ ಪಾಪಿ[redacted]!! . . . . ಆಹಾ ! ಒಂದಾಯ್ತು ! . . . ಎರಡಾಯ್ತು .!! ಎಲ್ಲಿ ಬಲ ವಂತವಿಲ್ಲವೋ ಅಲ್ಲೂ ದ್ರೋಹ ! ಅಲ್ಲೂ ಮೋಸ !! . . . ಆಗಲಿ, ಆಗಲಿ-ಸೋಲು ಒಂದುಸಲವಾಯ್ತು, ಇನ್ನು ಗೆಲವು ನನಗೆ ! (ಎಂದು ಚಂಪಳನ್ನೇ ನೋಡುತ್ತ ತಲೆ ತೂಗುವನು.)

ಚಂಪ—ನೀನು ಏನಾದರೂ ಬೊಗಳಿಕೋ-ನನ್ನ ದಾರಿ ನನಗೆ-(ಎಂದು ರಾಜನ ಕಡೆ ಮೆಲ್ಲಗೆ ನೋಡುತ್ತಾಳೆ. ಗಿರಿ ಅದನ್ನು ನೋಡಿ ಪುನಃ ಉದ್ರೇಕಗೊಂಡು ರಾಜನ ಮೇಲೆ ಬೀಳಲು ಹೋಗುತ್ತಾನೆ. ಚಂಪಳು ಅಲ್ಲಿಯೇ ಮೇಜಿನ ಮೇಲಿದ್ದ ಒಂದು ದೊಡ್ಡ ಚಾಕುವನ್ನು ತೆಗೆದುಕೊಂಡು ಗಿರಿಯನ್ನು ಹೆದರಿಸುತ್ತ) ನೀನೇನಾದರೂ ಅವನ ಮೈ ಮುಟ್ಟಿದರೆ ನೋಡು !................

ಗಿರಿ—(ಚಂಪಳ ಕೈಯಿನ ಚಾಕುವನ್ನು ನೋಡಿ ರಾಜನ ಮೇಲೆ ಬೀಳಲು ಹಿಂತೆಗೆದು) ತೊಲಗೋ-ನಾಯಿ ! . . ಹೇಳಿದ್ದು ಕೇಳಿಸಲಿಲ್ಲ ?-ತೊಲಗು! (ರಾಜನು ಗಂಭೀರದೃಷ್ಟಿಯಿಂದ ಒಂದೆರಡುಬಾರಿ ಗಿರಿಯನ್ನೂ-ಚಂಪಳನ್ನೂ ನೋಡಿ ಹೊರಟುಹೋಗುತ್ತಾನೆ. ಗಿರಿ ಅವನು ಹೋದಮೇಲೆ ಚಂಪಳ ಕಡೆ ತಿರುಗಿ ಅವಳನ್ನು ಆಪಾದಮಸ್ತಕವೂ ನೋಡಿ) ಏನೇ ಅನ್ನದ್ರೋಹಿ ! . . . ನನ್ನ ಮೇಲೆ ಕೈ ಮಾಡುವಷ್ಟು ಧೈರ್ಯ ಬಂತೆ ನಿನಗೆ !

ಚಂಪ—ಓಹೋ ಮಾಡೇ ಮಾಡ್ತಿನಿ ! ನಿನಗೂ ಹೆದರೊಲ್ಲ-ನಿಮ್ಮಪ್ಪನಿಗೂ ಹೆದರೊಲ್ಲ !

ಗಿರಿ—ಮುಚ್ಚು ಬಾಯಿ !-ಚರಂಡಿ ನಾಯಿ !

ಚಂಪ—ಚರಂಡಿ ನಾಯೀನೋ ?-ಊಹುಂ !-ಚರಂಡಿ ನಾಯೀ ಮೂಸಿಕೊಂಡು ಬರೋನು ನೀನೆಲ್ಲೀ ನಾಯಿ ?

ಗಿರಿ—ಏನಂದೇ ! (ಎಂದು ಅವಳ ಮೇಲೆ ತಟ್ಟನೆ ಬಿದ್ದು, ನೆಲಕ್ಕೆ ಕೆಡವಿಕೊಂಡು-ಅವಳ ಕೈಲಿದ್ದ ಚಾಕು ಕಿತ್ತು ಎಸೆದು, ಹಾಗೆಯೇ ಹತ್ತಿರದಲ್ಲಿ ಬಿದ್ದಿದ್ದ ಸರಪಳಿಗಳನ್ನು ತೆಗೆದುಕೊಳ್ಳುತ್ತಾನೆ. ಆಮೇಲೆ ತನ್ನ ಮೊಳಕಾಲಿನಿಂದ ಅವಳನ್ನು ನೆಲಕ್ಕೆ ಒತ್ತಿಕೊಂಡು ಅವಳನ್ನು ಸರಪಳಿಗಳಿಂದ ಭದ್ರವಾಗಿ ಬಿಗಿಯುತ್ತಾ) ಈಗ ನೋಡು !-ನೀನು ಹೇಳಿದೆಯಲ್ಲಾ ಕಟ್ಟೆಡು ಅಂತ !-ಕಟ್ಟೆಟ್ಟೆ !!

ಚಂಪ—(ಬಿಡಿಸಿಕೊಳ್ಳಲು ಒದ್ದಾಡುತ್ತ) ಬಿಡೋ, ಬಿಡೋ ನನ್ನ !-ಮುದಿಕತ್ತೆ !! . . . ನಿನ್ನ ಮನೆ ಹಾಳಾಗ !!

ಗಿರಿ ನೀನು ಕಾಲಿಟ್ಟ ದಿವಸವೇ ಹಾಳಾಯ್ತು ! (ಎಂದು ಅವಳನ್ನು ಎಳೆದು

ಕೊಂಡು ಹೋಗಿ, ಮೊದಲು ಕಟ್ಟಿದ್ದ ಕಂಭಕ್ಕೆ ಅಲುಗದ ಹಾಗೆ ಬಲವಾಗಿ ಬಿಗಿದು ಕಟ್ಟುತ್ತಾನೆ.)

ಚಂಪ—ಆಗಲಿ, ಏನೇನು ಮಾಡುತ್ತೀಯೋ ಮಾಡು—ದೇವರಿದ್ದಾನೆ!

ಗಿರಿ—ಏನಂದೆ? ದೇವರೆ? ಹ್ಹಹ್ಹಹ್ಹಹ್ಹಾ!!— . . ದೇವರು! ಎಲ್ಲಿದ್ದಾನೆ ದೇವರು? . . . ನೀನಿದ್ದ ಊರಿನಲ್ಲಿ ಇರೊಲ್ಲ ದೇವರು! ದೇವರಂತೆ!-ದೇವರು! ಅಬ್ಬಾ! ಪಿ ಶಾ ಚಿ!-ಆಹಹಹಹಾ!-ಅದೆಂಥಾ ಕಳ್ಳ ಮೋಹ-ಸುಳ್ಳು ನಟನೆ! . . . ವಿಷದ ಮೊಟ್ಟೆ!!

ಚಂಪ—ಊಂ! ಮೋಹ! . . . ಮೋಹವಂತೆ!—ಈ ಮುದಿ ಕರಡೀಗೆ!! ಆಹಾಹಾ! ನೀನೋ-ನಿನ್ನ ರೂಪೋ!-ನಿನ್ನ ದುರ್ನಾತವೋ! ನಿರ್ವಾಹವಿಲ್ಲ!-ಮುದಿಮಂಗನ ಮೋಹ! . . . . ನಿನ್ನ ಅನ್ನಾ ಬಟ್ಟೆಗೆ ಬೆರಗಾಗಿ ಇಲ್ಲಿ ಇದ್ದೇಂತ ತಿಳಿಕೊಂಡೆಯಾ?- . . . . ತಿಳಿಗೇಡಿ!

ಗಿರಿ—(ಅಲ್ಲೇ ಬಿದ್ದಿದ್ದ ಒಂದು ಚೌಕವನ್ನು ತೆಗೆದುಕೊಂಡು ಅವಳ ಬಾಯಿಗೆ ತುರುಕಿ) ಈಗ? . . . ಈಗ?-ಮಾತಾಡು ನೋಡೋಣ-ನನ್ನರಗಿಣಿ! (ಹುಬ್ಬು ಹಾರಿಸಿ ತಲೆ ಆಡಿಸುತ್ತ) ಈಗ ಸರಿಯಾಯ್ತು ನಿನಗೆ! . . . . ಲೇ ಚಂಪೆ!-ಆಯಿತಲ್ಲ ನಿನ್ನ ಮಾತು-ಇನ್ನು ನಾನು ಸ್ವಲ್ಪ ಮಾತಾಡ್ತೀನಿ-ಕೇಳು . . . . ಚಂಪಾ, ನಿನ್ನನ್ನು ಎಷ್ಟು ಪ್ರೀತಿಸುತ್ತಿದ್ದೆ! . . . ನೀನು ಸಿಕ್ಕಾಗ . . . . ಹಳೇ ವಿಷವೆಲ್ಲಾ ನನ್ನ ಹೃದಯದಿಂದ ತೊಡೆದುಹೋಯ್ತೂಂತ ಮಾಡಿದ್ದೆ! . . . ಆಹಾ! ನೀನೊಂದು ಹೊಸ ವಿಷವಾದೆ!! . . . ಪ್ರೀತಿಯ ಬಂಧನವೇ ಶಾಶ್ವತ-ಎಂದು ತಿಳಿದಿದ್ದೆ; ನೀನು ಅದನ್ನೂ ಮಣ್ಣುಪಾಲು ಮಾಡಿದೆ! . . . ಹೆಣ್ಣು ಹೂವಿನಂತೆ ಕೋಮಲವಾದ್ದು-ದೇವಿಯಂತೆ ಪೂಜ್ಯವಾದ್ದು-ಅಂತ ನಾನೂ ಒಂದು ಕಾಲದಲ್ಲಿ ನಂಬಿದ್ದೆ! . . . ಏಳು ವರ್ಷದ ಹಿಂದೆ ಅದೆಲ್ಲಾ ನಿರ್ನಾಮವಾಯ್ತು! . . . ನೀನು ನನ್ನ ಕಣ್ಣಿಗೆ ಬಿದ್ದೆ-ಪುನಃ ಎಲ್ಲಾ ಬದಲಾಯಿಸಿತು! ಚಂಪಾ! . . . ನೀನು ನನ್ನ ಮನೇ ಬಾಗಿಲಿಗೆ ಭಿಕ್ಷಕ್ಕೆ ಬಂದ ದಿನ!-ಅದೆಂಥಾ ಕೆಟ್ಟದಿನ! . . ಹುಂ! . . . "ನ ಸ್ತ್ರೀ ಸ್ವಾತಂತ್ರ್ಯ

ಮರ್ಹತಿ!" ಪಾಪ, ಹಾಗೆ ಹೇಳಿದ ಮಹಾನುಭಾವ ಬಲು ಠೋಕರ್ ತಿಂದಿರಬೇಕು !! ಈಗ ಗೊತ್ತಾಯಿತೆ ?-ಹೆಣ್ಣು ಬಂಧನದಲ್ಲಿರೋ ಹಾಗೆ ಯಾಕೆ ಚಿತ್ರಗಳನ್ನು ಬರೀತಿದ್ದೇಂತ? . . . ಇಷ್ಟು ಸುಂದರ ವಾದ ಭಗವಂತನ ಸೃಷ್ಟಿಯಲ್ಲಿ ಒಂದೇ ಒಂದು ಡೊಂಕು !-ಹೆಣ್ಣು ! ಸಮಾಜ ಅನ್ನೋ ನಾಯಿಯ ಡೊಂಕುಬಾಲ ಹೆಣ್ಣು !! . . ಆಹಾ, ಎಲ್ಲರೂ ನನ್ನನ್ನು ಹುಚ್ಚಾಂತ ತಿಳಿಕೊಂಡಿದ್ದರು !-ಹುಟ್ಟು ಹುಚ್ಚರು ! . . . ಆಹಾ ! ಚಂಪಾ, ಈಗ ನೀನು ನನ್ನ ಭಾವ ನೆಯ ಮೂರ್ತಿಮತ್ತಾದ ರೂಪ ! . . ಇದಕ್ಕೆ ಮೊದಲು, ಎಂದೂ ನೀನು ಮುಖದಲ್ಲಿ ಈ ಯಾತನೆ-ಈ ರೋಷ ತೋರಿಸುತ್ತಿರಲಿಲ್ಲ ! . . . ಅದಿಲ್ಲದೆ ನನ್ನ ಚಿತ್ರಗಳು ಅಪೂರ್ಣವಾಗುತ್ತಿದ್ದುವು. ಆಗ ಅದೆಲ್ಲಾ ನಾಟಕದ ಬಂಧನ, ನಾಟಕದ ಯಾತನೆ-ನಾಟಕದ ರೋಷ ! ಈಗಲೀಗ ಸರಿ !-ಬಹಳ ಸ್ವಾಭಾವಿಕವಾಗಿದೆ ! ........ ಬಹಳ ! ಬಹಳ !!-ಬಹಳ ಸೊಗಸಾಗಿದೆ !........ಆಹಾ ಇಂದು ನನ್ನ ಚಿತ್ರ ಪೂರ್ಣವಾಯ್ತು !........ಸಂಪೂರ್ಣವಾಯ್ತು !! ನೀನು ಹದಿಸಾರಾಣಿ ದಿವಾಸ್ವೈರಿಣಿಯಾದರೇನು !........ಈ ಸ್ಥಿತಿಯಲ್ಲಿ ನಿನ್ನ ರೂಪ ಕಣ್ಣಿಗೆ ಹೆಂಡದಂತಿದೆ !! ಹ್ಹ-ಹ್ಹ-ಹ್ಹ-ಹ್ಹಾ ! (ಅವಳ ಸಮೀಪಕ್ಕೆ ಬಂದು ಅವಳ ಮುಡಿಯನ್ನು ಬಿಚ್ಚಿ ಕೆದರಿ ಅವಳ ಭುಜಗಳ ಮೇಲೆ ಕೆಪರುತ್ತ) ಇನ್ನೂ ಚೆನ್ನಾಗ್ತೀಗ........ತಾಳು ! ತಾಳು ! ರಕ್ತ !.......ರಕ್ತ ಚಿತ್ರಕ್ಕೆ ರಂಗು ಕೊಡುತ್ತೆ ! (ಅಲ್ಲೇ ಕೆಳಗೆ ಬಿದ್ದಿದ್ದ ಚಾಕುವನ್ನು ಬಡುಕಿ ತೆಗೆದುಕೊಂಡು ಅವಳ ಕೆನ್ನೆಯ ಮೇಲೆ ಗಾಯಮಾಡುವನು. ರಕ್ತ ಚಿಮ್ಮುವುದು-ಚಂಪಳು ಮುಖದಲ್ಲಿ ಬಹಳ ಯಾತನೆಯನ್ನು ತೋರುವಳು) ಹೋ ! ಹೋ ! ಹೋ !! ರಕ್ತಚಿತ್ರ! ಮಹಾಚಿತ್ರ !!........ಸಫಲವಾಯ್ತು !....... ಗೆದ್ದೆ ! ಗೆದ್ದೆ !!!-(ಎದೆ ತಟ್ಟಿಕೊಂಡು ಉನ್ಮತ್ತನಾಗಿ ಕುಣಿಯುತ್ತಾನೆ.)........ಚಂಪಾ, ಈ ಏಳು ವರ್ಷದಲ್ಲಿ ಇಂಥಾ ಚಿತ್ರಕ್ಕೆ ನೂರಾರುಸಲ ಪ್ರಯತ್ನಪಟ್ಟೆ-ಸಫಲವಾಗಲಿಲ್ಲ. ಇಂಥಾ ಮಾದರಿ ಎಂದೂ ನನ್ನ ಮುಂದಿರಲಿಲ್ಲ ! ಇಂದು-ನನ್ನ ಈ ಜನ್ಮದ ಕಾರ್ಯ ಮುಗೀತು ! ಗೆದ್ದೆ !........(ಸ್ವಲ್ಪ

ಹೊತ್ತು ಮೌನವಾಗುತ್ತಾನೆ)........ಚಂಪಾ, ಚಂಪಾ, ನೀನು ಎಲ್ಲಿದ್ದೆ? ........ಎಲ್ಲಿಗೆ ಬಂದೆ ?........ಚಿಪ್ಪು ಹಿಡಿದು ಬೀದಿ ಬೀದಿ ಅಲೆಯು ತ್ತಿದ್ದೆ-ಭಿಕಾರಿಣಿ !- ಚರಂಡಿಯಲ್ಲಿ ಬಿದ್ದು ಹೊರಳಾಡುತಿದ್ದೆ !- ಚಾಂಡಾಲಿ ! ಕೈ ಹಿಡಿದೆತ್ತಿ-ಚಂಪಾ ಎಂದು ಕರೆದು-(ಎದೆ ತಟ್ಟಿ ಕೊಳ್ಳುತ್ತ)........ಇಲ್ಲಿ ಧರಿಸಿದೆ !........ಆದರೇನು !-ನೀನು ನಿನ್ನ ಚರಂಡಿ ಚಾಳಿ ತೋರಿಸಿಯೇ ಬಿಟ್ಟೆ ! ನನಗೇ ಮೋಸ ಮಾಡಿದೆ ಯಲ್ಲಾ ನೀನು !........ಹುಂ ! ಆದರೇನು ? ಮೋಸ ನಿನ್ನದಾ ಯಿತು !-ಗೆಲುವು ನನ್ನದಾಯಿತು ! ಸ್ತ್ರೀರೂಪದ ನಾಯಿ[illegible] ! ........ಚಂಪ, ನಿನಗೆ ಏನು ಕಟ್ಟುಕಟ್ಟಳೆ ಇತ್ತು ?........ನೀನೂ ಕೊಟ್ಟೆಯಲ್ಲಾ ಕೈ !........ಹುಂ ! ಹೆಣ್ಣಿನ ಕುಲವೇ ಹೀಗೆ ! ಸತಿಯಾಗಲಿ-ಸೂಳೆಯಾಗಲಿ-ಹೆಂಗಸನ್ನು ನಂಬಿ ಸುಖಿಯಾದೆ- ಅನ್ನುವ ನರಪ್ರಾಣಿಯಾದರೂ ಇದೆಯೇ ಈ ಲೋಕದಲ್ಲಿ ?........ ಹೊಲತೀ, ನಿಮಗೆ-ಒಡವೆ-ಬಟ್ಟೆ, ಪ್ರೇಮ-ಒಲವು, ನಂಬಿಕೆ, ಒಂದೂ ಒಪ್ಪುವುದಿಲ್ಲ ! ನಿಮಗೆ ಒಪ್ಪುವುದು ಒಂದೆ !-ಒಂದೇ !!- ಬಂಧನ !-ಕಬ್ಬಿಣದ ಸರಪಳಿ ಬಂಧನ !........ಹಿಂದೆ-(ಕೈ ತೋರಿ ಸುತ್ತ) ನನ್ನ ಕೈ ಹಿಡಿದು ಹೆಂಡತಿ ಅನ್ನಿಸಿಕೊಂಡವಳು, ನನಗೆ ಕಲಿಸಿದ ಗುರುವಿಗೇ ಮನಸೋತು ಮೈತೆತ್ತಳು. ಇಂದು, ನಾನು ಕೈ ಹಿಡಿದೆತ್ತಿದ ನೀನು ನನ್ನ ಶಿಷ್ಯನಿಗೆ ಮೈಸೋತೆ !-ಅಂದು ಆದ ಗಾಯ ಗುಣವಾಯ್ತು-ಇಂದು ಆಗಿರೋ ಗಾಯ ಗುಣವಾಗುವು ದಲ್ಲ !........(ವ್ಯಂಗ್ಯವಾಗಿ) ನಗುತ್ತ ಹುಂ !-ಕಟ್ಟಿದ ಹೊರತು ಹೆಣ್ಣನ್ನು ಇಟ್ಟುಕೊಳ್ಳೋ ಉಪಾಯವೇ ಇಲ್ಲಾಂತ ಕಾಣುತ್ತೆ ! ಪೂರ್ಣವಾಗಿ ನಂಬಿದವನನ್ನು ಸಹ ಅಡಿಗಡಿಗೆ ಮೋಸಗೊಳಿಸಿ, ಅವನಿಗೆ ನರಕಯಾತನೆ ಕೊಡುವುದಕ್ಕೆ-ಸ್ವಲ್ಪವೂ ಹಿಂತೆಗೆಯುವು ದಿಲ್ಲ !-ಹೇಸುವುದಿಲ್ಲ !-ಸ್ತ್ರೀ ಜಾತಿ !!........ಅಬ್ಬಾ ! ಇದೇನು ತಲೆ ತಿರುಗುತ್ತಾ ಇದೆ........(ಎಂದು ಸ್ವಲ್ಪ ತೂರಾಡುವನು. ಆಮೇಲೆ ಹಾಗೆಯೇ ಚೇತರಿಸಿಕೊಂಡು)........ಹುಂ ! ಹುಟ್ಟುಗುಣ ಸುಟ್ಟರೆ ಹೋದೀತೇ !.... ಹಾ ! ಹಾ !!—ಸುಟ್ಟರೆ ಹೋಗಬಹುದು !

ಹೌದು! ಹೌದು! ಸುಡಬೇಕು!—ಈ ಹುಳವನ್ನು ಸಜೀವವಾಗಿ ಸುಟ್ಟು ಬೂದಿ ಮಾಡಬೇಕು!! —ಅದೇ ಸರಿ!.... ಚಂಪಾ, ನಿನಗೆ ಬೆಂಕಿ ಇಡುತ್ತೇನೆ! (ಚಂಪಳು ಗಾಬರಿಯಿಂದ ಒದ್ದಾಡುತ್ತಾಳೆ—ನರಳುತ್ತಾಳೆ.) -- ನರಳುತ್ತೀಯಾ?—ನರಳು!—ನರಳು!!—ಬಹಳ ಹೊತ್ತಿಲ್ಲ ಇನ್ನು ನರಳುವುದು!....(ಚಂಪಳು ತಲೆ ಅಲ್ಲಾಡಿಸುತ್ತಾಳೆ.) ಏನು? ಬೇಡವೇ? ಬೆಂಕಿ ಹಚ್ಚೋದು! ಹ ಹ್ಹಾ! ನೀನು—ಚಂಪಾ—ನೀನು ನನ್ನ ಎದೆಗೇ ಬೆಂಕಿ ಇಟ್ಟೆ!—ನಾನು ನಿನ್ನ ಕಾಲಿಗಾದರೂ ಬೆಂಕಿ ಇಡಬೇಡವೆ?—ನೀನೇ ಹೇಳು! (ಚಂಪಳು ಮಾತನಾಡಲಾರಳು.) ಹುಂ! ಹಚ್ಚಲೋ? ಅಗ್ನಿಹೋತ್ರಕ್ಕೆ ಅಪ್ಪಣೆಯೋ? (ಚಂಪಳು ನಿಶ್ಚಲಳಾಗುತ್ತಾಳೆ.) ಸರಿ. ನಿನ್ನ ಒಪ್ಪಿಗೆಯಾಯ್ತು! (ಅಲ್ಲೇ ಬಿದ್ದಿದ್ದ ಕೆಲವು ಹಳೇ ಕಾಗದ-ಕಸದ ಬುಟ್ಟಿ-ಚಿಂದಿ ಬಟ್ಟೆ ಎಲ್ಲವನ್ನೂ ಸೇರಿಸಿ ಅವಳ ಕಾಲುಬುಡದಲ್ಲಿ ಗುಡ್ಡೆ ಹಾಕುತ್ತಾನೆ-ಅವಳು ಅಲ್ಲಾಡುವುದಿಲ್ಲ) ಹುಂ! ಆಯ್ತು (ಕೈಕೊಡವಿಕೊಳ್ಳುತ್ತ ಏಳುತ್ತಾನೆ.) ಈಗೆಲ್ಲಾ ಸಿದ್ಧವಾಯ್ತು! ಇನ್ನು ನಿನ್ನ ದಹನ! ಸಜೀವವಾದ ದಹನ!!-ಚಂಪಾ: ಹ ಹ್ಹ ಹ್ಹ-ಹ್ಹಾ!-ಹ್ಹ-ಹ್ಹ! ಹ್ಹ-ಹ್ಹಾ!! (ಎಂದು ಉನ್ಮಾದದುದ್ರೇಕದಿಂದ ಕುಣಿಯುವನು. ಅವನಿಗೆ ರಾಜ ಹೊರಗಿನಿಂದ ಬಂದು ನಿಂತದ್ದು ಗೊತ್ತಾಗುವುದಿಲ್ಲ. ಚಂಪಳು ಸ್ವಲ್ಪ ಅಲುಗುತ್ತಾಳೆ.) ಚಂಪಾ, ಸ್ವಲ್ಪ ಹಾಗೇ ಇರು-ಅಲುಗಬೇಡ! ಈ ಚಿತ್ರ-ಚಂಪಾ, ನಾನು ಬರೆದ ಎಲ್ಲಾ ಚಿತ್ರಗಳಿಗಿಂತ ಚೆನ್ನಾಗಿದೆ!-ಬೆಂಕಿ ಇಟ್ಟುಬಿಟ್ಟರೆ-ಓ-ಹೋ.ಹೋ-ಹೋ!! ಇನ್ನೂ ಕಳೆಯೇರುವುದು!.... ಆಹಾ! ಸುಮ್ಮನಿರು ಚಂಪಾ, ನಿನ್ನ ಈ ದಹನಚಿತ್ರ-ಅಮರವಾಗಿ-ಆಚಂದ್ರಾರ್ಕವಾಗಿರುವಂತೆ ಮಾಡುತ್ತೇನೆ:....ಆ ಮುಂದಿನ ಕೀರ್ತಿಯ ಕನಸು ಕಾಣುತ್ತ-ಹೊರಡು-ಬೆಂಕಿಯ ಬೆನ್ನಿನ ಮೇಲೆ! ....ಇಗೋ, ಇಟ್ಟೆ ಬೆಂಕಿ! (ಗಿರಿ ಕಡ್ಡಿಗೀರಿ ಬೆಂಕಿಹೊತ್ತಿಸಲು ಬಾಗುವನು. ಅಷ್ಟರಲ್ಲಿ ರಾಜ ಹಿಂದಿನಿಂದ ಅವನ ಮೇಲೆ ಹಾರಿ ಕೆಳಗೆ ಕೆಡವಿಕೊಂಡು' ಬಲವಾಗಿ ಅವನ ಕುತ್ತಿಗೆಯನ್ನು ಹಿಸುಕುವನು-ಒಂದು ಕ್ಷಣದಲ್ಲಿ ಗಿರಿ-ನಿಶ್ಚೇಷ್ಟಿತನಾಗುವನು—ರಾಜ ಎದ್ದು ಚಂಪಳ ಬಾಯಿ ಬಟ್ಟೆ ತೆಗೆದು ಸರಪಣಿಗಳನ್ನು ಬಿಚ್ಚುತ್ತಿದ್ದ ಹಾಗೆಯೇ)

ತೆರೆ''

# ಕಾವ್ಯಾಲಯದ ಪ್ರಕಟನೆಗಳು

| | | | |
|---|---|---|---|
| ಬೊಮ್ಮನ ಹಳ್ಳಿಯ ಕಿಂದರಿ ಜೋಗಿ | ೦ | ೩ | ೦ |
| ಕಿಂದರಿ ಜೋಗಿ ಮತ್ತು ಇತರ ಕಥನ ಕವನಗಳು | ಮುಗಿದಿವೆ | | |
| ಪಾಂಚಜನ್ಯ | ೧ | ೪ | ೦ |
| ಚಿತ್ರಾಂಗದಾ | ೧ | ೦ | ೦ |
| ಸಂನ್ಯಾಸಿ ಮತ್ತು ಇತರ ಕಥೆಗಳು | ಮುಗಿದಿವೆ | | |
| ನನ್ನ ದೇವರು ಮತ್ತು ಇತರ ಕಥೆಗಳು | ೧ | ೪ | ೦ |
| ಮಲೆನಾಡಿನ ಚಿತ್ರಗಳು | ೧ | ೧೨ | ೦ |
| ಕಾನೂರು ಸುಬ್ಬಮ್ಮ ಹೆಗ್ಗಡಿತಿ | ಮುಗಿದಿವೆ | | |
| ಸಾಹಿತ್ಯಪ್ರಚಾರ ಮತ್ತು ಇತರ ಭಾಷಣಗಳು | ೧ | ೨ | ೦ |
| ನಿರಂಕುಶ ಮತಿಗಳಾಗಿ | ೦ | ೧೨ | ೦ |
| **ಪು. ತಿ. ನರಸಿಂಹಾಚಾರ್** | | | |
| ಅಹಲ್ಯೆ | ಮುಗಿದಿವೆ | | |
| ದೋಣಿಯು ಬಿನದ ಮತ್ತು ಕವಿ | ೧ | ೦ | ೦ |
| ಶಾರದಯಾಮಿನಿ | ೧ | ೦ | ೦ |
| ರಾಮಾಚಾರಿಯ ನೆನಪು | ೧ | ೪ | ೦ |
| ಗೋಕುಲ ನಿರ್ಗಮನ | ೧ | ೦ | ೦ |
| **ತೀ. ನಂ. ಶ್ರೀಕಂಠಯ್ಯ** | | | |
| ರಾಕ್ಷಸನ ಮುದ್ರಿಕೆ | ೧ | ೪ | ೦ |
| ಹರಿಹರನ ನಂಬಿಯಣ್ಣನ ರಗಳೆ | | | |
| **ಗೊರೂರು ರಾಮಸ್ವಾಮಿ ಐಯಂಗಾರ್** | | | |
| ಸಾಹಿತ್ಯದ ಜೀವಾಳ | ಪ್ರತಿಗಳು ಮುಗಿದಿವೆ | | |
| ಹಳ್ಳಿಯ ಬಾಳು | ೧ | ೪ | ೦ |
| **ಎಸ್. ವಿ. ರಂಗಣ್ಣ** | | | |
| ಶೈಲಿ | ೧ | ೧೪ | ೦ |
| **ಆನಂದ** | | | |
| ಸ್ವಪ್ನಜೀವಿ ಮತ್ತು ಇತರ ಕಥೆಗಳು | ೦ | ೧೨ | ೦ |